ಧ್ವಮ್ ಅಹ ಚತುರಂಗಬಲವನು ತಕ್ಕೆಡೆಯಲ್ಲಿ ಇರಿಸುಹವು (ವ್ಯೂಹ Nr.). ಆವನೊಬ್ಬನು ಅತಿಶಯಮ್ ಅಹ ಪರಾಕ್ರಮದೊಡನೆ ಕೂಡಿದಪನ್ ಉಣ್ಟು, ಆತನು ಊರ್ಜಸ್ವಿ ಎನಿಸುಗು ((Nr.). ಅಂಶಕ್ಕೆ ಸರಿ ಅಹ ಭಾಗದಲ್ಲಿ ಅರ್ಧಮ್ ಎನಿಸುಗು (Nr.). ಮೇಲಕ್ಕೆ ನಿಗುಚಿದ ತೋಳು ಸಹಿತಮ್ ಅಹ ಪುರುಷಪ್ರಮಾಣನಲ್ಲಿ ಪೌರುಷಮ್ ಎನಿಸುಗು (Nr.). ಸಣ್ಣತುಂ ಕೂರಿತ್ತುಮ್ ಅಹ ಧಾನ್ಯದ ತುದಿ (ಶೂಕ Nr.). ಸಮಾನಪಿಣ್ಡಮ್ ಅಹರು (Nom. Sing. ಅಹಂ) ಏಟು ತಲೆಗಡವನ್ನಬರ ಸನಾಭಿಗಳ್ ಎನಿಸುಗು (Nr.). ಅಹಸ್ನಾದು (ಭವಿತವ್ಯ, o. r. ಅಹನ್ನಾದುದು, Nn. 52). ಲಯಮ್ ಅಹಲ್ಲಿ (ನಿರ್ಮೂಲನ Nn. 100). ಆ ಕ್ಷಣಮ್ ಅಹನ್ಥಾ ಕಾರ್ಯ (ಅಪೂರ್ವ Nn. 101). ಅಹವಂ (J. 30, 25. 27). ದೀರ್ಘಮ್ ಅಹನ್ತಹ (Śmd. 84 Mḍb. Cm.). — ಅಹುದು. = ಅಪ್ಪುದು, ಆಗುವದು, ಹೌದು; ಅಕ್ಕುಂ. plural ಅಹವು (Bp. 16, 7; 43, 82; 51, 6; 60, 36; Śmd. 103. 178 Mḍb. Cm.). ದೋಷರಹಿತಮ್ ಎಹಗೆ ಅಹುದು, ಅಹಗೆ ಪೇೞ್ದಂ (Śmd. 175). ಅಹುದು (ಉದಯಿಸುಗುಂ 84 Mḍb. Cm.). ಪ್ರಯೋಗಿಸುವುದು ಅಹುದು (ಪ್ರಯೋಗಿಸಪಡೆಗುಂ 135 Mḍb. Cm.). ದೊಡ್ಡಿತ್ತು ಅಹುದು (ವಿಪುಲ, ಪೃಥು, etc. Nr.). ನಿಡಿದು ಅಹುದು (ಆರೋಹ Nr.). see also Bp. 1, 20; 25, 27; 46, 19; 52, 7; 55, 37; 58, 33; 60, 43; Bh. 1, 8, 6. 89; 2, 13, 14. the meaning "yes" appears *e. g.* in Bh. 1, 8, 11. 55; 2, 13, 35; Rāṁ. 26, 23; J. 29, 24. — ಅಹುದಹುದು. rep. Bp. 16, 7; 25, 21; 28, 43; 50, 24; 59, 3. — ಅಹುದಾಗು. -ಆಗು. to become or be "yes" or true. ಅಹುದಾದರೆ ಅಹುದೆನ್ನಿ ! ಅಲ್ಲವಾದರೆ ಅಲ್ಲವೆನ್ನಿ ! (Dp. 54). — ಅಹುದೆನ್. -ಎನ್. to say yes, to assent (see s. ಅಹುದಾಗು). 2, to affirm, to maintain as true or certain. ಅಹುದೆಮ್ಬನ್ಥಾ ಕಾರ್ಯ; ಅಹುದೆನಿಪ ಆ ಕಾರ್ಯ (ನಾಮ, indeed, certainly, etc. Nn. 162). — ಅಹೆಂ. (also ಅಹೆ, Bp. 52, 33). = ಅಪ್ಪೆಂ, etc. (Bp. 24, 70; 40, 30; 49, 28). further conjugation: ಅಹೆ (44, 13); ಅಹಂ, ಅಹನು (10, 2; 39, 60; 55, 33); ಅಹೆವು (12, 27; 34, 17); ಅಹಿರಿ (39, 47. 60; 46, 14); ಅಹವು (60, 36).

ಅಹಂಯು **ahaṁyu.** *selfish, proud.*

ಅಹಗೆ **a12-hage1.** = ಅಹಂಗೆ, ಹಾಗೆ, etc. that manner, in that manner, thus. ತಿಬ್ಬಮ್ ಎಹಗೆ ಅಹುದು, ಅಹಗೆ ಮಾಡಿದಂ (Śmd. 175). see Bp. 6, 2; 15, 17; 21, 13; 23, 14; 24, 19. 51; 25, 37; 30, 10. 26; 33, 16; 35, 51; 43, 46. 57; 45, 43; 50, 49; 57, 47. 70; 61, 35. 68. — ಅಹಗಿಹಗೆ. -ಇಹಗೆ. that manner and this manner (Bp. 4, 63).

ಅಹಂಕರಣ **ahaṁ-karaṇa.** = ಅಹಂಕಾರ. see ನಿರ್-.

ಅಹಂಕರಿಸು **ahaṅkarisu.** to be egotistic or proud, to act in an egotistic manner. see Bp. 22, 67; 23, 42; 26, 15; 27, 75; 54, 47; 57, 3.

ಅಹಂಕರಿಸುಹ **ahaṅkarisuha.** acting in an egotistic manner. ನಾ ಬಲ್ಲಿದ, ತಾ ಬಲ್ಲಿದನ್ ಎನ್ದು, ಒಬ್ಬರಿಗೆ ಒಬ್ಬರ್ ಅಹಂಕರಿಸುಹಂ (ಅಹಮಹಮಿಕೆ Nr.).

ಅಹಂಕಾರ **ahaṁ-kāra.** the making of self, sense of self; *egotism, pride, haughtiness;* the conception of individuality.

ಅಹಂಕಾರಗತ **ahaṅkāra-gata.** a kind of āśi (Kāvy. III, 3, B, 166).

ಅಹಂಕಾರಭಾವ **ahaṅkāra-bhāva.** the state of being egotistic or proud. see ಬೆಬ್ಬ್.

ಅಹಂಕಾರಭಾವತ್ವ **ahaṅkāra-bhāvatva.** = ಅಹಂಕಾರಭಾವ. (My.).

ಅಹಂಕಾರವತ್ **ahaṅkāra-vat.** -ನ್ತ. *proud.*

ಅಹಂಕಾರವನ್ತ **ahaṅkāra-vanta.** Tbh. of ಅಹಂಕಾರವತ್. (My.). feminine ಅಹಂಕಾರವನ್ತೆ (My.).

ಅಹಂಕಾರಿ **ahaṅkāri.** *proud* (ಹೆಜಂಗಿನ್ತ ಮೇಲೆಮ್ಬಂ Mr. 230).

ಅಹಂಕೃತ **ahaṁ-kṛita.** egotistic; proud (Bp. 60, 56).

ಅಹಂಕೃತಿ **ahaṁ-kṛiti.** = ಅಹಂಕಾರ. (Bp. 25, 52; 46, 11).

ಅಹಂಕ್ರಿಯೆ **ahaṁ-kriye.** = ಅಹಂಕೃತಿ. (My.; ಸೊಕ್ಕು G.).

ಅಹಂಗೆ **a12-haṅge.** = ಅಹಗೆ, ಹಾಂಗೆ, etc. that manner, etc. (ಅನ್ತೆ Śmd. 124 Mḍb. Cm.). ಯುಕ್ತಿ ಎಹಂಗೆ ಅಹುದು, ಅಹಂಗೆ (164 Mḍb. Cm.). see Bp. 24, 35. 64; 33, 20; 36, 15; 38, 11; 40, 10; 43, 30; 44, 14; 46, 60; 47, 22; 48, 20; 54, 56; 57, 69; 61, 68.

ಅಹತ **a-hata.** not struck; unbeaten. 2, *unwashed or new clothes.*

ಅಹನ್ **ahan.** *a day.*

ಅಹನಿ **ahani.** -ನೀ. dual: day and night (Sk.); a day (My.).

ಅಹನೀಸರಂಜಾಮು **ahanīsarañjāmu.** tools of any kind (My.; H.).

ಅಹನ್ತವ್ಯ **a-hantavya.** not to be killed (Bp. 38, 65; 53, 41).

ಅಹನ್ಯಹನಿ **ahani-ahani.** day by day, daily. (My.).

ಅಹಮ್ **ahaṁ.** I.

ಅಹಮಹಮಿಕೆ **ahaṁ-ahamike.** *conceit or assertion of superiority; outdoing a rival* (ಒರ್ವರ್ ಒರ್ವರಿಗೆ ಮುಂಚೂದು Mr. 464).

ಅಹಮ್ಪೂರ್ವಿಕೆ **ahaṁ-pūrvike.** emulative onset; *outdoing a rival.*

ಅಹಮ್ಬ್ರಹ್ಮತ್ವ **ahaṁ-brahmatva.** the state of considering oneself to be one with the universal soul: egotism, pride (My.).

ಅಹಮ್ಭಾವ **ahaṁ-bhāva.** a high notion of one's own superiority (My.).

ಅಹಮ್ಮತಿ **ahaṁ-mati.** *conceit; spiritual ignorance.*

*ಅಹಮ್ಮು **ahammu.** = ego, pride. (Tbh. of ಅಹಂ). ಕಾಡಿಕಾಡಿ ಕೆಡಿಸಿಹುವೆನ್ನ, ಕೂಡಲಸಂಗಮದೇವಾ ಅಹಮ್ಮೆಮ್ಬ ಅಹಂಕಾರವೆನ್ನ ! (Bv. 252).

ಅಹರ್ **ahar.** = ಅಹಸ್. (Śmd. 99 Mḍb. MS.).

ಅಹರ್ನಿಶ **ahas-niśa.** day and night (Śmd. 99; Bp. 41, 13).

ಅಹರ್ಪತಿ **ahas-pati.** *the sun.*

ಅಹರ್ಮುಖ **ahas-mukha.** *the dawn.*

ಅಹಲೆಕಾರ **ahalekāra.** a public servant, an official person (My.; Br.; H.).

ಅಹಲ್ಲಾದ **ahallāda.** Tbh. of ಅಹ್ಲಾದ. (S. Mhr.).

ಅಹವಾಲು **ahavālu.** state, circumstances, condition, events (C.; ಅಹ್ವಾಲು Br.; H.).

ಅಹಷಾಂ **ahaṣāṁ.** a kind of irregular troops, an armed police (Br.; R.); attendance, followers, retinue (H.); a number of coolies at the disposal of Mēstris. (My.).

ಅಹಸ್ **ahas.** = ಅಹೋ 1. *a day.*

ಅಹಸ್ಕರ **ahas-kara.** *the sun.*

ಅಹಸ್ಪತಿ **ahas-pati.** = ಅಹರ್ಪತಿ. (Mr. 33).

ಅಹಸ್ಸು **ahassu.** Tbh. of ಅಹಸ್. (My.).

ಅಹಹ **ahaha.** *cf.* ಅಹಹ s. ಅಹ 2. *an interjection implying surprise, pain* (ವೇದನೆ Śmd. 393; ವೇದನಾರ್ಥಂ Ct. I, 56; ನೋವಿನ ನುಡಿ Bhn. 15), *pleasure, calling* (27, 31; 40, 30; B. 5, 164. 197).

ಅಹಹಾ **ahahā.** = ಅಹಹ. (B. 3, 18; My.).

ಅಹಾ **ahā.** = ಅಹಹಾ. (B. 2, 1. 6; My.). *cf.* ಆಹಾ.

ಅಹಾರ್ಯ **a-hārya.** not to be stolen or removed. 2, *a mountain.*

ಅಹಾಹಾ **ahāhā.** = ಅಹಹಾ. (Bhāgavata 10, 40, 2).

ಅಹಿ **ahi.** *a serpent.* 2, *the demon Vṛitra.* 3. Rāhu. 4, a traveller. 5, the sun.

ಅಹಿಂಸೆ **a-hiṁse.** not hurting or injuring; not killing; harmlessness, innocence of blood-shedding (ಧರ್ಮ, ಕೊಲ್ಲದಿಹುದು Nn. 79; Śmd. 93; Bp. 38, 3. 12. 65).

ಅಹಿಕ **ahika.** lasting a certain number of days. 2, a blind snake. *cf.* ಅಹಿಕ.

**ಅಹಿಕಟಕ ahi-kaṭaka.** he whose bracelet is a serpent: Śiva (Bp. 44, 31). 2, a number of serpents (My.).

**ಅಹಿಕಾನ್ತ ahi-kānta.** desired by snakes: air, wind. 2, the master of serpents: Śēṣa.

**ಅಹಿಕಾನ್ತಕಟಕ ahikānta-kaṭaka.** = ಅಹಿಪಕಂಕಣ. Śiva (Bp. 54, 54).

**ಅಹಿಕಾಯ ahi-kāya.** the body of a snake (ಭೋಗ, ಸರ್ಪಗಳ ದೇಹ Nn. 113; ಭೋಗ Mr. 514).

**ಅಹಿಕುಣ್ಡಲ ahi-kuṇḍala.** he whose ear-ring is a serpent: Śiva (Bp. 27, 26).

**ಅಹಿತ a-hita.** not suitable; not beneficial; unfriendly; *an enemy;* damage, harm.

**ಅಹಿತಕರ ahita-kara.** detrimental, adverse; unwholesome (B. 3, 36).

**ಅಹಿತಕಾರ ahita-kāra.** adverse, inimical; an enemy (Bp. 20, 38).

**ಅಹಿತತ್ವ a-hitatva. 1.** enmity. see J. 2, 8.

**ಅಹಿತತ್ವ ahi-tatva. 2.** the essential nature of snakes and its knowledge. see J. 2, 8.

**ಅಹಿತುಣ್ಡ ahi-tuṇḍa.** = ಅಹಿಮುಖ. the mouth or face of a serpent (ಪುಷ್ಕರ, ಹಾವಿನ ಮುಖ Nn. 27).

**ಅಹಿತುಣ್ಡಿಕ ahi-tuṇḍika.** *a catcher or exhibiter of snakes.*

**ಅಹಿಧರ ahi-dhara.** Śiva (My.; ಮಹಾದೇವ Cb.).

**ಅಹಿಪ ahi-pa.** the sovereign of the serpents: Śēṣa (My.; ಮಹಾಶೇಷ Cb.). 2, any large serpent.

**ಅಹಿಪಕಂಕಣ ahipa-kaṅkaṇa.** he whose bracelet is Śēṣa: Śiva (Bp. 46, 33).

**ಅಹಿಪತಿ ahi-pati.** = ಅಹಿಪ. (Bp. 18, 95; 38, 63; 55, 23).

**ಅಹಿಭಯ ahi-bhaya.** fear of a lurking snake; *mistrust or apprehension of treachery.*

**ಅಹಿಭುಜ್ ahi-bhuj.** ಅಹಿಭುಕ್. *a peacock.* 2, Garuḍa.

**ಅಹಿಭೂಷಣ ahi-bhūṣaṇa.** Śiva. (My.).

**ಅಹಿಮಕರ a-hima-kara.** the sun. (My.; Rām. 1, 16, 22).

**ಅಹಿಮಹಿಳೆ ahi-mahiḷe.** a woman of the serpent race (My.).

**ಅಹಿಮುಖ ahi-mukha.** = ಅಹಿತುಣ್ಡ. (ಕೌಶಿಕ, ಹಾವಿನ ಮುಖ Nn. 10).

**ಅಹಿರ್ಬುಧ್ನ ahir-budhna.** *Śiva.*

**ಅಹಿಶಯ್ಯೆ ahi-śayye.** a couch formed of a snake or of snakes (Śmd. 224).

**ಅಹಿಸ ahisa.** = ಅಪಿಸ. (Tbh. of ಅಧೀಶ?). see ನೆತ್ತಿಗರಪಿಸ.

**ಅಹೀರಣಿ. ahīraṇi.** *a kind of snake, said to be two-headed* (ದ್ವಿಮುಖ, ಇತ್ತಲೆಯಂ Mr. 401).

**ಅಹುದು ahudu.** yes. see s. ಅಹ.

**ಅಹೇತು a-hētu.** absence of cause or reason (Kāvy. III, 3, B, 121; ಆಕಸ್ಮಿಕ Mr. 538).

**ಅಹೇತುಕ a-hētuka.** causeless, groundless (Kāvy. III, 3, B, 135 seq.).

**ಅಹೇರು ahēru.** = ಅಹೇರು. *the plant Asparagus racemosus* Willd.

**ಅಹೋ ahō. 1.** = ಅಹಸ್. (ವಾಸರ, ಹಗಲು Nn. 149).

**ಅಹೋ ahō. 2.** *an interjection used in surprise, satisfaction or praise* (ಬೇಹ ವಚನ, ಒಳ್ಳಿಹ ಮಾತು, o. rs. ಬಹನ್ಹಾ ನುಡಿ, ಅಹನ್ತಾ ನುಡಿ Nn. 149; ಬೇಹ ನುಡಿ Mr. 536), *calling* (ಕರಹ, ಕರೆವಲ್ಲಿ 149), *reproach,* etc.

**ಅಹೋರಾತ್ರ ahas-rātra.** *day and night;* a day and night from sunrise to sunrise. 2, *a day and night of the pitṛis = a month of the gods = a year of Brahmā = 2000 yugas of the gods*

**ಅಹೋರಾತ್ರಿ ahas-rātri.** a day and night (ಸಂಗರ, ಅಹೋರಾತ್ರಿಗಳ್, ಹಗಲಿರುಳುಗಳ್ Nn. 19).

**ಅಹೋರಾತ್ರೆ ahas-rātre.** a whole day and night, 60 gaḷige, (24 minutes; ೬೦ ಗಳಿಗೆಗಳ್ Mr. 64).

**ಅಹ್ನ ahna.** = ಅಹಸ್. *a day;* time (ವೇಳೆ Mr. 66).

**ಅಹ್ನಾಯ ahnāya.** *timely, soon, quickly.*

**–ಅಳ್ aḷ. 1.** = –ಅಣ್ 1. see ಮೇಗಳ (= ಮೇಗಣ).

**ಅಳ್ aḷ. 2.** (= ಅಳ್ಳು 2). shaking; rising and falling with alternate motions, heaving (of the aḷḷes). *cf.* ಅಲೆ 1. — ಅಳ್ನೆಲ. = ಅಳ್ಳ ನೆಲ. a bog, a morass (My.). — ಅಳ್ದಳಿರ್. -ತಳಿರ್. shaking young foliage (Cpr. 7, 99). — ಅಳ್ದೆರೆ. -ತೆರೆ. an oscillating wave (Cpr. 7, 84). — ಅಳ್ಳೊಟ್ಟೆ. = ಅಳ್ಳ ಹೊಟ್ಟೆ. the two aḷḷes and the intermediate region (My.).

**–ಅಳ್ aḷ. 3.** = –ಅಳು 1. the feminine of –ಅಂ 1. ತಡೆದಳ್ ಬಾಸಿಗಮ್ ಇರ್ಕುವಾಕೆ (Śmd. 266). ಅಱದಳ್ ಪಾಣ್ಡುತನುಜರ ತೆಱನ್ ಎಲ್ಲಮನ್ ಈಕೆ (266). ಆನ್ ಅಱವೆಂ, ಪೃಥೆ ಅಱವಳ್ (263). ಸಿರಿ ಒಲ್ವಳೆ ಹೃದ್ಯವಿದ್ಯರಂ! (109). ಸರಸ್ವತಿ ಕೆಯ್ನೆರವಾಗೆ ಪೇೞ್ದಪಳ್ (109). ವಿಜಯಸಿರಿ ವಾಚಾಟರಿಗೆ ಮೆಚ್ಚುವಳೆ? (Bh. 2, 13, 47). — ಅಳನ್ತ. -ಅನ್ತ. the final -ಅಳ್ (Śmd. 265).

**–ಅಳ್ aḷ. 4.** = –ಅಳು 2, (–ವಳ್). the feminine of –ಅಂ 3. ಅವಳ್, ಇವಳ್, ಉವಳ್ (Śmd. 245. 174. 186), ಅಪಳ್, ಪೆಱಳ್, ಕಿಱಯಳ್, ಪಿರಿಯಳ್, ಇನಿಯಳ್, ಅಸಿಯಳ್, ಇಮ್ಮಿದಳ್, ಕೆಮ್ಮಿದಳ್ (245), ನೇರಿದಳ್ ಇವಳ್ (109), ಎಳೆಯಳ್, ಪೞೆಯಳ್ (185), ಓಸರಿಸಿದಳ್, ರಾಗಿಸಿದಳ್, ಭೋಗಿಸಿದಳ್, ಪಾಡಿದಳ್, ಒಸೆದಳ್ (243. 245). ರನ್ನವಸಿಱಳ್ (Śm. 37). — ಅಳನ್ತ. -ಅನ್ತ. the final -ಅಳ್ (Śmd. 243).

**ಅಳ್ – aḷ. 5.** (= ಅಳೆ 1). contact, a light touch, grazing. (South M. ಅಳುಮ್ಪು, to scratch). — ಅಳ್ಪೇಱು. (Śmd. 214). a wound made by grazing, a superficial wound, a scratch. [ಅಮರೆ ಬಿಗಿದೊಗೆದ ಮೊಲೆಗಳಳ್ಪೇಱನೊಳಳ್ಪಾಡಿ ತಳ್ಪಂಕಂಗುಟ್ಟೆ ನೀರಾಟ ಮಾಡುವಾಗಳ್ Pb. 5, 62 va.; Ap. 7, 120]. ಕೇತನಪ್ರಚಯದ ಅಳ್ಪೇಱು (Abh. P. 13, 80).

**ಅಳೆ – aḷa. 1.** = ಅಲವು 2, (ಅಳ್ 5–), ಅಳವಿ, ಅಳವು 1. [@ there seems to be a confusion with regard to the word ಅಳವು 1, the back formation ಅಳ– has been mistaken for an independent word]. joining, contact; nearness, contiguity, proximity (ಸಮೀಪ = Bhn. 29; T. ಅಳೆ, to approach, come near; see T., M. ಅಡು s. ಅಟ್ಟು 2; T. ಅಡ, communication, intercourse; *cf.* ಅಡವು 1, ಅಣೆ 2, ಅಣೆ 3, ಅಲ್ 3, ಅಸ 3, ಅಳ್ಕೆ; T. ಅಳ್ಳಿ, v. t., to mix, mingle together, copulate; Tu. ಅಲ, v. t., to mix; ಅಲೆಜು, v. i., to mix, mingle, be united). 2, fitness, suitableness, propriety; conformity (T. ಅಳವು); comeliness (Te. ಅಲವು, ಅಲುವು). 3, power, ability, possibility, practicability, reach (Te. ಅಲವಿ, ಅಲವು). 4, power, strength, force, vigour (ಸತ್ವ Bhn. 28. 29); control. [ಪೇೞಲಾಂ ಬಗೆದನ್ದೆನಿದೆನ್ನಳವೆ ಗಣಧರೋದಿತ ಚರಿತಂ Ap. 1, 34; Cv. 1281]. ಅಸಮಭಕ್ತಿವಿಶಾಲನಂ ಬಣ್ಣಿಸಲ್ ಅಳವೆ ಸುರ ದನುಜ ಮನುಜರಿಗೆ? (Bp. 1, 33). ಬಸವನಂ ಕೀರ್ತಿಸುವಡೆ ಎನ್ನ ಅಳವೆ? (1, 34). see Kāvy. I, 5, 47; Abh. P. 7, 115 va.; Bp. 2, 32; 32, 48; 47, 23. 27; 49, 23; 51, 46; 56, 1; Ṛśv. 5, 42. 126; 13, 91; Bh. 1, 8, 18; J. 7, 7. — ಅಳವಡಿಕೆ. -ಪಡಿಕೆ. the act of joining, adhering or sticking to. ಬಿಡದೆ ಸುಖದುಃಖಗಳೊಳ್ ಒನ್ದನು ಹಿಡಿದು, ಸದ್ವ್ಯವಹಾರಮುಖದೊಳ್ ನಡೆಯಲ್, ಒನ್ದಱ ತುಷ್ಟಿ ಒನ್ದಱ ನಷ್ಟ ತನಗೆ ಅಹುದು; ಹಿಡಿವುದು (what one uses to

seize or desires to do, etc. and) ಇಹಪರವೆರಡಱೊಳಗೆ ಅಳವಡಿಕೆ ತನಗೆ ಅಹುದು (what sticks to one, as the fruit of works, in this and that world) ಒನ್ದನ್ ಒನ್ದನು ಬಿಡುವುದು! ಅಲ್ಲದೆ ಬೇಱೆ ಮತಮ್ ಇಲ್ಲ (Bh. 1, 8, 25). 2, preparation (J. 22, 47). 3, thought, pleasure, wish. ನಿನ್ನ ಮನಸಿನೊಳ್ ಅಳವಡಿಕೆ ಎಹಗೆ; ಅಹಗೆ ಮಾಡುವೆನ್, ಅಣ್ಣ! (Bp. 44, 13). *cf.* Te. ಅಲವಡಿ, properly, suitably. — ಅಳವಡಿಸು. -ಪಡಿಸು. = ಅಳವಳಿಸು. to join (v. t.); to tie together, to tie; to collect in a heap; to put to or on, to attach, to apply to; to put; to put in readiness; to prepare, to make ready; to bring about; to confine, to subdue; to make oneself ready; etc. [Kr. 2, 41; Ap. 4, 21]; (Cpr. 9, 96). see Bp. 3, 26; 4, 4. 37; 5, 12; 8, 14. 37; 12, 19; 18, 29; 21, 26; 22, 7; 27, 16; 28, 53; 29, 3. 5; 32, 54; 33 sum.; 35, 37; 38, 15; 43, 24; 45, 10; 49, 33. 34; 51, 72; 52, 40; 57, 33. 46; 59, 22; 60, 38; Rśv. 10, 31va.; 14, 27. 28; Bh. 1, 7, 13; 1, 8, 67; 1, 10, 14; 2, 4, 13; J. 4, 20; 6, 17; 7, 36; 8, 21; 9, 28; 12, 4. 51; 13, 10; 14, 12; 20, 15. 22; 22, 25. 28; 25, 29; 26, 10; 29, 38; 30, 7. 54; 31, 52; 33, 35; 34, 7. — ಅಳವಡು. -ಪಡು. to be closely joined [ಅಳವಟ್ಟ ಸಾರಧನಮಂ ಮೂವಿಟ್ಟಿಗಂ ಪೊಣ್ದು Pb. 6, 30; ಗುರುವಪ್ಪುದರಿಂದು ಶಿಷ್ಯನಪ್ಪುದರಿಂದು ಗುರು ಶಿಷ್ಯ ಸಮ್ಬನ್ಧವಾರಿಗೆಯೂ ಅಳವಡದಾಗಿ Cv. 50; Bv. 667]. (Ch. v. 59). ಅಳವಟ್ಟುದು (ಅಮರ್ಕೆ Ct. II, 84). 2, to be joined to, (to be contained in); to be tied (Bp. 44, 32; 61, 26; Rśv. 5, 25 va.). 3, to be fit or proper; to agree (see Ch. s. ದುರ ದೃಷ್ಟ; Bp. 20, 8; 38, 15. 34; 39, 19; 40, 50). 4, to be or become ready; to be established; to be at hand (Śmd. 74. 230; Abh. P. 15, 46; Bp. 8, 56; 35, 25; 60, 45; Rśv. 10, 31 va.; J. 3, 9). 5, to be nice, to have or get a beautiful form (Bp. 34, 22; Grj. 3, 34; 4, 71). 6, to come within the limits of (J. 6, 3; Kk. 95). 7, to come about (as ವಿಲಾಸಂ, Rśv. 6, 11 va.). 8, to be obtained, to be got (Bp. 45, 43; 61, 72). 9, to be observed, as a rule (4, 43). 10, to be possible (29, 14; 35, 49; 40, 20. 23; 53, 12). 11, to be thought of; to be known (ಮನನವಾಗು G.; ತಿಳಿ S. Mhr.). *cf.* Te. ಅಲವಡು, to be accustomed, be practised in; to be mastered (= ಅಭ್ಯಾಸ). — ಅಳವರಿ. -ಪರಿ. to go beyond the proper or common boundaries, to be excessive. ಅಳವರಿದು ಬೇವುದು (ಪೊಂಗು Ct. I, 73). 2, to be very great (Bp. 51, 46). — ಅಳವಱು. -ಪಱು. to break power (Cpr. 10, 94 va.). — ಅಳವಳಿಕೆ. -ಪಳಿಕೆ. = ಅಳವಡಿಕೆ. (J. 22, 47, o. r. ಅಳವಡಿಕೆ). — ಅಳವಳಿಸು. -ಪಳಿಸು. = ಅಳವಡಿಸು. (J. 7, 17). — ಅಳವಟು. -ಅಟು. to fall off in respect to vigor, etc., to lose strength, to become depressed or despondent, to faint. see Abh. P. 7, 116 va.; 9, 145; Rśv. 13, 104 va. J. 2, 16; 5, 43; 7, 49; 8, 33; 14, 19; 16, 39; 19, 10; 20, 25; Rām. 5, 8, 82; Bh. 8, 23, 12. — ಅಳವಟಿಸು. -ಅಟಿಸು. to cause to fall off in vigor, etc. (J. 22, 25). — ಅಳವಾಱು. -ಆಱು. strength to be dried up or go out (Cpr. 8, 78; Śśv. 1, 44). — ಅಳವೇಱು. -ಏಱು. the true proportion to rise; to rise or grow in its true proportion (Bp. 38, 39).

**ಅಳೆ aḷa.** 2. = ಅಳೆ 4, etc. [@ this does not seem to have any independent occurrence or meaning, appearing only in ಅಳವೇರಿ = a moat]. (*cf.* the M. s. ಅರಳೆ 3). — ಅಳವೇರಿ. = ಅಳವೇರಿ. (My.).

**ಅಳಕ aḷaka.** = ಅಳ್ಳಕ. neither thick nor thin, as applied to fluids (S. Mhr.; Te. ಅನುಳ; T. ಅಳಗ, water; M. ಅಯೆ, ಅಱ್, to slacken; to be watery, be diluted). ಅಳಕವ್ ಅದ ಮೊಸರು ದ್ರಪ್ಸ್ಯಮ್ ಎನಿಸುಗು, ಅದು ನೀಱುಮೊಸರು (Nr.).

**ಅಳಕ aḷaka.** 1. Tbh. of ಅಲೇಖ [ಬರೆಪಕಾಱರ ಕೈಗಳ ಕೇಡು ಸುಜ್ಞನ ಪ್ರಳಕದ ಕೇಡು ಪೇಱುಸಿದೊಡರ್ಥದ ಕೇಡೆನೆ Pb. 1, 12]. (Śmd. 360; Kk. 85; Ct. II, 42; My.).

**ಅಳಕ aḷaka.** 2. = ಅಲಕ, ಅಳಕೆ. (My.; ಉಂಗುರಗೂದಲು G.).

**ಅಳಕಿಸು. aḷakisu.** = ಅಳಿಕಿಸು 2, etc. to frighten (My.).

**ಅಳಕು aḷaku.** 1. = ಅಳ್ಕು 1, etc. to fear (My.).

**ಅಳಕು aḷaku.** 2. = ಅಳ್ಕು 2, etc. fear (My.).

**ಅಳಕು aḷaku.** 3. = ಅಳುಕು 3. to prick, to throb, as a thorn in the flesh (C.).

**ಅಳಕು aḷaku.** 4. = ಅಳುಕು 4. the pricking of a thorn; the state of being pricked, as with a thorn, that of being distressed or annoyed (used *e. g.* of servitude, C.).

**ಅಳಕು aḷaku.** 5. = ಅಲಕು, etc. to move about (v. i.), etc. — ಅಳಕ್ಯಾಡು. -ಆಡು. to shake, as water carried on the head (C.); to be shaky, as a tooth (C.); to bubble, as liquors when boiling (C.).

**ಅಳಕೆ aḷake.** = ಅಳಕ 2, etc. (My.; G.).

***ಅಳಂಕು aḷaṅku.** = ಅಳಕು 5. ಬರೆದುದು ಬರ್ಚಿಸಿತ್ತಮರ್ದುದಟ್ಟು ದಳಂಕಿದುದುರ್ಚಿ ಪೊಕ್ಕು ಬೇವರಾಂದುದು Ap. 3, 43.

**ಅಳಂಕೆ aḷaṅke.** = ಅಳ್ಕೆ (?). — ಅಳಂಕೆಗೊಳ್. -ಕೊಳ್. to embrace? (Cpr. 7, 37). [relief? ಧಾತ್ರಂಗಮಳಂಕೆಗೊಣ್ಡು ಪಿರಿದಂ ಚಿನ್ತಾನ್ತರಂ ಪೋಯ್ತು. Ap. 4, 18].

**ಅಳಗ aḷaga.** (Tbh. of ಅಲಕ?). N. of a kind of horse (Bp. 59, 40).

**ಅಳಗೆ aḷage.** = ಅಳಿಗೆ, q. v. (My.).

**ಅಳಂಗಿ aḷaṅgi.** (Tbh. of ಅರಟು or ಅರಲು). — ಅಳಂಗಿಮರ. a tree, Calosanthes indica Blum. (St. & Pl.; or Oroxylum indicum Vent.).

**ಅಳತ aḷata.** = ಅಳೆತ. the act of having measured or of measuring (C).

**ಅಳತೆ aḷate.** measure, scale; extent; measurement (ಪ್ರಮಾಣ Nr.; Si. 420; ವ್ಯಾಮ, ಪ್ರಮಾಣ Nn. 129; ಪೌರುಷ Hla.; Nn. 166; C.). [ಅಳತೆಗೆ ತೂಕಕ್ಕೆ ಣಿಕೆಗೆಯೊಳಗಾದುವು ಸಕಳವಸ್ತುಗಳ್ Ap. 10, 53]. ಅಳತೆಯಲ್ಲಿ ಮುಟ್ಟ ಪೌರುಷಮ್ ಎಮ್ಬುದು (Mr. 474). ಅಳತೆಯ ಬಳ್ಳ (ಪ್ರಸ್ಥ 472). ಅಂಗುಲಿಗಳ ಒನ್ದೊನ್ದಱ ಅಡ್ಡಗಲದ ಪ್ರಮಾಣು ಎಣ್ಟು ಜವೆಯ ಅಳತೆ ಅಕ್ಕುಂ (324). ಅಳತೆಗೆ ಸಾಧನಂಗಳು ಮಾನಾರ್ಥಕಂಗಳು; ಪಲಕರ್ಷಾದಿಗಳಿನ್ದೆ ಅಳೆವ ಅಳತೆ (ಪೌತವ); ಧಾನ್ಯದ ರಾಶಿಯನ್ ಅಳತೆ ಮಾಡುಹಂ (ಉತ್ಕಾರ, etc.); ನೂಱು ಮಾರ ಅಳತೆಯ ಬಟ್ಟೆ (ಧಣ್ವಾಪಥ, etc. Nr.). ಹನ್ನೆರಡು ಗಾವುದದ ಅಳತೆಯ ಸಮುನ್ನತಿಯ ಕಲ್ಯಾಣಪುರಂ (Bp. 5, 13). ಅಳತೆಗೆ ಅಳವಡದು ಎಮ್ಬ ಸೆಪ್ಪಿಂ ...ಕಡಲ್ ಕಣ್ಗೆ ಎಸೆದುದು (J. 6, 3). ಹಗ್ಗದಿನ್ದ ಅಱವನ್ನು ಅಳತೆ ಮಾತಲಾಗಿ (B. 4, 101). see ಅಡ್ಡಳತೆ, ಕಾಣ್ಬಳತೆ, ಕೂಗಳತೆ, ಸುತ್ತಳತೆ, ಹದಱಾರಿಯಳತೆ; J. 20, 42. 44; 21, 31. — ಅಳತೆಗೆಡು. -ಕೆಡು. the proper measure to be violated or transgressed. ಅಳತೆಗೆಟ್ಟು ಭೋಜನ ಮಾಡಿ (B. 4, 122). ಅಳತೆಗೆಟ್ಟು ಎಷ್ಟಿಗೂ ಸರಾಯ ಕುಡಿಯಲಿಕ್ಕಿಲ್ಲ (5, 230).

**ಅಳಬು aḷabu.** = ಅಳವು 2. — ಅಳಬಳವು. -ಅಳವು. rep. weighing in the mind, consideration, intention, desire (Rām. 6, 50, 14).

**ಅಳಮ್ಬೆ aḷambe.** = ಅಣಬೆ, etc. (My.; Tu. ಅಳಂಬು; Mhr.)

***ಅಳರ್ aḷar.** = ಅಲರ್ 1. ಅಳರದೊಡನಿರ್ದು ಬಡವಾನಳನೆನ್ನುಂ ಪೆರ್ಚ ಳೀಯದನ್ತಮ್ಮುಧಿಯಂ Kr. 3, 150.

**ಅೞಱ್ aḷaṟ. 1.** -ಱಿ. = ಅಂಜು 1. to fear (ಭಯ Śmd. Dh.; ಭಯ, ಪೆಱಱ್ Śm. 40; *cf.* ಅರ್ಱ್ 3, ಅಡಲು 1). ಅೞರ್ದಂ (Śmd. 55). — ಅೞಱಿ‌ಪೊಯ್. -ಪೊಯ್. to beat so that fear is produced (Abh. P. 11, 69; Cpr. 6, 84; Śśv. 3, 39).

**ಅೞಱ್ aḷaṟ. 2.** -ಱಿ. = ಅಂಜು 2. fear (ಭಯ Ct. 1, 7; I, 94, o.r. ಎೞಱ್; ಪೆಱಱ್, ಅದಿರ್ಪು, ಭಯ Kk. 42); anxiety of mind, anguish (ಮನೋವ್ಯಥೆ My.).

*ಅೞಱ್ aḷaṟ. 3. to get destroyed. ಗಾಳಿಯನೆಡೆಗಲಿಸಿದುದು ವಿನೀಳ ಘನಾಘನಮನೞಱಿ ಪಱಿದುದು Ap. 4, 85; ಸಕಲಭುವನವೊನ್ದೊನ್ದಱೊಳ್ ಕೇಣಿಕೊಣ್ಡುಜ್ಜ್ವಳಿಸಲ್ ಸೂಸಲ್ ಪಳಂಚಲ್ ಸಿಡಿವೊಡೆವೞಱಲ್ Pb. 10, 65.

**ಅೞಱಿಸು aḷaṟisu.** to frighten (Abh. P. 7, 44).

**ಅೞರ್ಪು aḷaṟpu.** fear (ಅಂಜಿಕೆ G.); anxiety of mind, anguish (My.).

**ಅೞಲಿ aḷali.** = ಅರಳಿ 1, etc. Ficus religiosa. — ಅೞಲಿಯ ಮರ. (ಬೋಧಿದ್ರುಮ, ಚಲದಲ, ಅಶ್ವತ್ಥ, etc. Si. 125).

*ಅೞಲು aḷalu. = ಅೞಲ್ 2. ಅಂಗತವಿಲ್ಲದ ಸಂಗವು ಅೞಲಿಲ್ಲದ ಹುಯ್ಯಲನ್ತೆ Bv. 455.

**ಅೞಲೆ aḷale. 1.** = ಅಣಿಲೆ, etc. Terminalia chebula (My.). — ಅೞಲೆಕಾಯಿಪಣ್ಡಿತ. a native doctor who knows only one or two common remedies for all diseases and who therefore for whatever disease prescribes ಅೞಲೆಕಾಯಿ. (Mr. & Rice); a quack doctor (Mr. H. Haigh). — ಅೞಲೆಕಾಯಿಮರ. (St. & Pl.). — ಅೞಲೆಯ ಕಾಯಿಗಿಡ. (ಅಭಯೆ, ಅಮೃತ, ಅವ್ಯಥೆ, ಕಲಿದ್ರುಮ; ಪಥ್ಯೆ G.). — ಅೞಲೆಯ ಕಾಯಿ. (Si. 135. 336; ಕರ್ಷಫಲ G.). — ಅೞಲೆಯ ಗಿಡ. (ಅಭಯೆ, ಅವ್ಯಥೆ, etc. Si. 135).

**ಅೞಲೆ aḷale. 2.** = ಅಣಲ್ 2, etc. a squirrel, Sciurus palmarum L. (S. Mhr.). see ಕೇಸೞಲೆ, ಮರ-.

**ಅೞವಡಿಕೆ aḷavaḍike.** = ಅಳವಡಿಸು, ಅಳವಡು, ಅೞವರಿ, ಅೞವೞಿಸು, ಅಳವಟು. ಅಳವಟಿಸು, ಅೞವೇಱು. see s. ಅೞ 2.

**ಅೞವೞ aḷavaḷa.** turning and twisting (Rām. 5, 8, 55; Mhr. ಅಳಾಪಿಳಾ).

*ಅೞವೞಲ್ aḷavaḷal. extreme grief, pang. ಹೃದಯಮನೞವೞಲಿನ್ದಱಿ ವಿದಾರಿಸುವುದಿನ್ತು Kr. 3, 101.

**ಅೞವಿ aḷavi.** = ಅೞ 1, etc. nearness, etc. (Bh. 3, 13, 26; J. 7, 47; 13, 32; 20, 26; 22, 7). 2, fitness, etc. 3, possibility, etc. (Bp. 29, 28; 56, 49; 58, 37; Grj. 4, 9). 4. strength, etc. [ಅವರಿಸಿದ ಕುಲದ ಬಲದ ಚಲದೞವಿಗಳೊಳ್ Pb. 1, 87; 6, 52]; (Bp. 11, 6; J. 8, 31; 12, 40). 5, meeting in battle, combat (J. 4, 45; 12, 37. 43; 16, 9); assault; wrestling (Rām. 5, 8, 36; Bh. 1, 7, 41). 6, confidence, trust (*cf.* ಅಡೆ 6). [7, a limit. ಅೞವಿಯಱಿದುಣ್ಬುಪಾಯಮಂ Ap. 6, 77 va. 8, measure. ಸೂಱುಯೋಜನದೞವಿಯ Pb. 5, 96 va.]. — ಅೞವಿಗರಿ. = ಅೞವಿಗೞಿ. (Rśv. 5, 55 va.). — ಅೞವಿಗೞಿ. -ಕೞಿ. to go beyond the proper bounds [ನಿನ್ನಯಶೋರಾಶಿಯನಿನ್ದುದ್ಯುತಿಯ ನಿಕಾಶಮನೊಳಕೊಳ್ಳ್ವುದೞವಿಗೞಿದಿರ್ದುದುಮಂ Kr. 3, 95]; (Abh. P. 7, 115 va.; Rśv. 5, 50 va. & 55 va.; 6, 44 va.). — ಅೞವಿಗೊಡು. -ಕೊಡು. to put confidence (Bh. 2. 13, 48). 2, to offer battle, to fight (Bh. 8, 23, 44; 8, 26, 18; J. 7, 48; 13, 5). ಅೞವಿದಪ್ಪು. -ತಪ್ಪು. to go beyond the proper bounds, to grow excessive. (Cpr. 5, 19 va.).

**ಅೞವಿಗ aḷaviga.** a friend (R.).

**ಅೞವು aḷavu. 1.** = ಅೞ 1, etc. [ಈ ಮಾಯೆಯ ಕಳೆವೊಡೆಯೆನ್ನಳವಲ್ಲ Bv. 15; Cv. 1281]. ಅವು ತಮ್ಮ ಅಳವಿನೊಳಗೆ ಬನ್ದ ಕೂಡಲೆ ಹಾಱಿ, ಅವುಗಳನ್ನು ಗಪ್ಪನೆ ಹಿಡಿಯುವವು (B. 3, 31; see 5, 31. 242; C. Bp. 47, 24; J. 4, 41; 6, 41; Rām. 3, 8, 42; My.). — ಅೞವುಗಿಡು. -ಕಿಡು. = ಅೞವೞಿ. (Rśv. 1, 135 va.).

**ಅೞವು aḷavu. 2.** = ಅೞಬು. measure [ಅನ್ತು ಸೊಗಯಿಸುವ ರೂಪಿನೊಳ್ ಪೊನ್ನಬಣ್ಣದನ್ತಪ್ಪ ತನ್ನ ಮೆಯ್ಯ ಬಣ್ಣಮಳವಲ್ಲವೊಪ್ಪೆ Pb. 2, 37 va.; Ap. 15, 11]. (Grj. 4, 36; My.; ಅೞತೆ G.; T., M.; Te. ಲಾವು). ಮಾಡಿದ ಕೊಲೆಗೆ ಅೞವಿಲ್ಲ (B. 4, 10). — ಅೞವುಗೋಲು. -ಕೋಲು. a measuring rod (My.).

**ಅೞವೆ aḷave.** a lease or agreement given to the ryot in writing (My., obsolete).

**ಅೞಸು aḷasu. 1.** sound in coitus (ಸುರತಧ್ವನಿ Śmd. II; Ct. I, 54; Kk. 85, o. r. ಎೞಸು, ಸುರತರವ Śm. 76, o. r. ದೞಸು; T. ಅಲ್ಸೈಪ್ಪು, to chatter, prattle; M. ಅೞಚ್ಚುರ, bellowing, shriek).

**ಅೞಸು aḷasu. 2.** = ಅೞೆಯಿಸು, ಅೞೆಸು. to cause to be measured or to measure (C).

*ಅೞಿ aḷi. = ಅೞಿ 2. ruin, destruction. — ಅೞಿಮನ. a mean mind. ಅೞಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಎನ್ತಹುದೊ! Bv. 92. — ಅೞಿಯಾಸೆ. -ಆಸೆ. a mean desire. ಎಲೆ ಎಲೆ ಮಾನವಾ ಅೞಿಯಾಸೆ ಬೇಡವೊ Bv. 165.

**ಅೞಿ aḷi.** = ಅಲಿ. [ತೊೞಪೆೞವೞಿಯುಂ ಮೊರೆವೞಿಕುೞಂಗಳುಂ ಮೆಲ್ಲನೆಸೆವ ಮೞಯಾನಿೞನುಂ Kr. 2, 71; Ap. 1, 57]. (ಭ್ರಮರ Śmd. Dh. No. 893; ತುಮ್ಬಿ Śmd. I; Nn. 107; ಅಱಿಡಿ Śm. 27; ಗುಂಗೀ ಹುಱಿ G.). — ಅೞಿವಣ್ಡು. -ಬಣ್ಡು. bee's honey (Rśv. 9, 60). — ಅೞಿವಣ್ಣ. -ಬಣ್ಣ. the colour of the black humble bee, a black colour (Sp. in w. v. 1105). — ಅೞಿವೆದೆ. -ಪೆದೆ. a bowstring of bees (Rśv. 5, 19 va.).

*ಅೞಿಕ aḷika. = ಅಲಿಕ (Sk.). ಆನನ್ತಫಣಿಕಾನ್ತೆಗಮೞಿಕಾನ್ತಾೞಿಕ ಫೞಕ ತಿೞಕ ಹರನೆನಿಪರಿಗಂಗಂ (Pb. 4, 18).

**ಅೞಿಕಿಸು aḷikisu. 1.** to oppose; to impede; to harass (ತಳ್ಪೊಯ್, ಅೞಿಸು, ಅಣ್ಡಳೆ, etc., ಪ್ರತಿಹತ Śs.; *cf.* ಅಡ 6).

**ಅೞಿಕಿಸು aḷikisu. 2.** = ಅೞಕಿಸು, ಅೞುಕಿಸು. to frighten (My.).

**ಅೞಿಕು aḷiku.** = ಅೞ್ಕು 1, etc. to fear (ಅಗಿ, ಭಯಗೊಳ್ Śs.; Bp. 30, 26).

**ಅೞಿಗ aḷiga.** (= ಅೞಿಯ ?). see ಕಮ್ಬೞಿಯೞಿಗ.

**ಅೞಿಗೆ aḷige.** = ಅೞಗೆ. a capacious earthen vessel to hold water or grain (My.). ಅಮ್ಬಲೀ ಕುಡಿದವ ಅೞಿಗೆ ಹೊತ್ತು ಕೊಣ್ಡು ಹೋದಾನೇ? — ಅೞುವ ಕನ್ದನಿಗೆ ಅೞಿಗೇ ಅಮ್ಬಲಿ (Prvs).

ಅೞಿಗೆ aḷige. = Tbh. of ಆವಲಿಕೆ (Śmd. 383).

*ಅೞಿಪಾಯಿಲ aḷipāyila. = ಅೞಿಪು 2. ಆೞರಸೆಮ್ಬುದೊನ್ದು ದನ್ದುಗಮೞಿಪಾಯಿಲಂ ಮಱುಕಮಾಮಯಮಪ್ಪ ಮೃತ್ಯುವೆಮ್ಬವಲ್ಲಿಗೆ ಪೊಱಗು Ap. 5, 30.

**ಅೞಿಪು aḷipu. 1.** = ಅೞುಪು 1. to be addicted to; to hanker after, to long for (*cf.* ಅಣ್ಪು 2, ಅೞುಗು 2; T. ಅೞಿ,

compassion, grace; Tu. ಅರಬು, desire). ಅಳಿಪುವನು (ಲೋಲುಭ ಲೋಲುಪ, ಲೋಲ, ಲಾಲಸ, ಲಮ್ಪಟ Hlā.). ಪರವಧುವಿಂಗೆ ಅಳುಪಿದವಂ (Jmt. 22).

**ಅಳಿಪು aḷipu.** 2.=ಅಳುಪು 2. hankering after, desire, addiction, attachment, love [ಆ ಪರಿತಾಪಮುಮಳಿಪನಳಿಪುಮಾ ವಲ್ಲಭನೊಳ್ ನೆರೆದಿರ್ಪ ಬಗೆಯುಂ Kr. 3, 202; Pb. 4, 55; Ap. 2, 46]. see Abh. P. 3, 77; Śsv. 3, 36; Abh. P. 6, 6. ಇನ್ದ್ರಿಯವಿಷಯಂಗಳಲ್ಲಿ ಅಳಿಪಿಲ್ಲದವನಂ ಶಾನ್ತನ್ ಎಮ್ಬುದು, ಮತ್ತಂ ಶ್ರಾನ್ತನ್ ಎಮ್ಬುದು (Hlā.). ಅಳಿಪಿನ್ಪಂ (Śmd. 132).

**ಅಳಿಯ aḷiya.** (Śmd. 40). (a man who is longed for? or one who joins a family?): a daughter's husband, a son-in-law [ಬನ್ದವರ್ ಪಾಣ್ಡವರಪ್ಪುದುಮಂ ತನ್ನಳಿಯಂ ವಿಕ್ರಮಾರ್ಜುನನಪ್ಪುದುಮಂ ತಪ್ಪಿಲ್ಲದಱಿದು Pb. 3, 73 va.]. (ಸ್ವಸ್ರೀಯ, ಜಾಮಾತೃ Nn. 124; ಸ್ವಸ್ರೀಯ Mr. 489; ಹಬ್ಬಿಗ Ct. I, 26; C.; Si. 266; Te. ಅಲ್ಲುಡು, ಅಲ್ಲುವಾಡು; Tu.; M. ಅಳಿಯ, a brother-in-law). ಎಮ್ಮಳಿಯಂ (Śmd. 161). ಮಗಳನ್ ಇತ್ತ ಅಳಿಯ ಮಯಿದುನರೊಳ್ ಸ್ವಸ್ರೀಯ (Mr. 489; see No. 2). ಅಳಿಯನ ಗೆಳೆಯ (ಜನ್ಯ G.). see Bp. 42, 6; 44, 52; Rām. 26, 16; ಅಯ್ಕಿಲ್ವೆಟ್ಟಳಿಯ, ಇಂಗಡಲಳಿಯ, ಚಳಿವೆಟ್ಟಳಿಯ, ಮನೆಯಳಿಯ, ಸೋದರಳಿಯ.— ಅಳಿಯನ ಕುರುಡು ಬೆಳಗಾದರೆ ಕಣ್ಡೀತು.— ಅಳಿಯನ ನೋಱ ಬೆಳಗಾತ ಕಾಣಬಹುದು.— ಅಳಿಯನ ಕೂಡ ಗೆಳೆಯ.— ಅಳಿಯ ಮುನಿದರೆ ಮಗಳ ಕರಕೊಣ್ಡು ಹೋದಾನು (Prvs.). 2,=ಸೋದರಳಿಯ. (My.). [ಹರಿನಿಜಯೋಗದಿನ್ದಱಿದು ತನ್ನಳಿಯಂ ಲಯಮಾದುದಂ Pb. 11, 110; Ap. 3, 55].— ಅಳಿಯನ ಗಿಡ. an undershrub, Sida carpinifolia Lin. (Z.).— ಅಳಿಯನ ಮಾವನ ಗಿಡ.=ಅಳಿಯನ ಗಿಡ. (Z.). —ಅಳಿಯಸನ್ತಾನ, ಅಳಿಯಕಟ್ಟು. the law of inheritance in the female line, according to which the family property descends not from a man to his son, but to his sister and her children (Tu.).

**ಅಳಿಯತನ aḷiyatana.** the state of being an ಅಳಿಯ (C.). see ಮನೆ—.

**ಅಳಿಱ್ aḷiṟ.** (Śmd. 40, o. r. ಒಳಿಱ್). ಅಳಿಗೆಗಳ್ (53).

**ಅಳಿಲ್ aḷil.** 1. -ಲು.=ಅಣಿಲ್, etc. ಅಳಿನ್ದಕಿ. a squirrel (ತರುಕುಟ, ತ್ರಿವಳಿ Mr. 165, o. rs. ತ್ರಿವಣೆ, ಅಣಿಲ್; My.). ಅಳಿಲು ಏಱಿದರೆ ಅರಳೀ ಮರ ಅಲ್ಲಾಡೀತೋ? (Prv.). ಅಳಿಲುಭಕ್ತಿ ಮಳಲ ಸೇವೆ (Prv. based on a legend).

**ಅಳಿಲ್ aḷil.** 2. the state of being slack or loose (J. 10, 50; *cf.* M. s. ಅಳಳ).

**ಅಳಿಲೆ aḷile.** (Śmd. 40).=ಅಣಿಲೆ, q. v. (My.).

**ಅಳಿಸು aḷisu.**=ಅಳಿಕಿಸು 1. (Śs.).

**-ಅಳು aḷu.** 1.=-ಅಳ್ 3. (C.). ಆಡಸುವಳು (Bp. 24, 2). ಮಾಡಿದಳು (24, 26). ಹೋದಹಳು (50, 12). ಸೌಖ್ಯವನ್ ಈವುತಿರ್ದಳು ಮಾಯೆ ಮೋಹಿನಿಗೆ (Prll. 3, 29). ಬಾಲಲೀಲೆಯ ಸೊಮ್ಮ ಸೂಱೆಯ ಕೊಡುತಲಿರ್ದಳು (3, 30).

**-ಅಳು aḷu.** 2.=-ಅಳ್ 4. (C.), *e. g.* ಅಗಡಳು, ಅವಳು, ಇವಳು.

**ಅಳುಕಿಸು aḷukisu.**=ಅಳಿಕಿಸು 2, etc. to frighten (My.).

**ಅಳುಕು aḷuku.** 1.=ಅಳ್ಕು 1, etc., (ಒಳ್ಕು). to fear, to be afraid of (My.; T. ಅಳುಕ್ಕು, to be frightened; to terrify; M. ಅಳುಕ್ಕು, to start; to shrink). [ಒನ್ದಕ್ಕಂಜುವೆ ಒನ್ದಕ್ಕಳುಕುವೆ Bv. 446]. see Bp. 16, 16; 17, 11. 15; 18, 51; 21, 15; 26, 30; 27, 30; 28, 54; 37, 39; 38, 30; 40 sum.; 44, 22. 51; 52, 15; 55, 10. 48; 58, 62; Bh. 1, 8, 28. 40; 1, 10, 31; 7, 6, 60; J. 6, 32; 11, 33; 28, 33; Rām. 5, 8, 36. 41; Prv. s. ನರಕ. ಕುದುರೆ ಕಡಿವಾಣಕ್ಕೆ ಅಳುಕುತ್ತವೆ (B. 3, 53).

**ಅಳುಕು aḷuku.** 2.=ಅಳ್ಕು 2, etc. fear (My.; Te. ಅಲುಕು, ಅಳ್ಕು; T. ಅಳುಕ್ಕು; M. ಅಳುಕ್ಕ).

**ಅಳುಕು aḷuku.** 3.=ಅಳಕು 3. (My.).

**ಅಳುಕು aḷuku.** 4.=ಅಳಕು 4. (My.).

**ಅಳುಕು aḷuku.** 5.=ಅಳಕು 5. (My.; see ಮೆಯ್ಯಳುಕು).

**ಅಳುಂಕು aḷuṅku.**=ಅಳುಕು 5. ನಿವಿಮಿರ್ದುವು, ಪೊಳೆದುವು, ಅಳುಂಕಿದುವು, ಅಮರ್ದುವು, ಜುಮ್ಮಿಸಿದುವು, ಅರ್ಪಿದುವು, ಸಮ್ಭ್ರಮದಿಂ ಸಮದೃಷ್ಟಿಯಾಗಿ ಸಿಲ್ಕಿದುವು, ಎಮೆಯಿಕ್ಕಲ್ ಮಱೆದುವು ಅವಳ ಧವಳಕಟಾಕ್ಷಂ (Śmd. 264).

**ಅಳುಪು aḷupu.** 1.=ಅಳಿಪು 1. to be addicted to, etc. [ಅಡಿ ಅಳುಪದಿರಾ, ಲೇಸಮಾಡಿ ಮಱುಗದಿರಾ Bv. 278; ಪರಧನ ಪರಸತಿಗಳು ಪದಿಪ್ಪದೆ ಶೀಲ Cv. 588]; (Rām. 3, 8, 21; Abhā. 2, 39; Bp. 28, 41; 40, 70; 42, 25; Rśv. 8, 117). ಅಳುಪುವಂ (ಲೋಲುಪ, ಲಮ್ಪಟ, ಲೋಲ, etc, Mr. 232).

**ಅಳುಪು alupu.** 2.=ಅಳಿಪು 2. (Ch. v. 20).

**ಅಳುಮ್ಬ aḷumba.** excess; greatness; excellence; further, etc. (ಪಿರಿದುಂ, ನಾಡೆ, ಕರಂ, etc., ಅತ್ಯರ್ಥಂ Ct. II, 25; ಅಣಿಯರ, ಪೆಮ್ಪು, etc., ಪಿರಿದು Kk. 49; ಅಗುನ್ದಲೆ, ಕರಂ, ನೆಱ, ನೂಳದು, ಪೊಮ್ಪುಟ, ಪೆಮ್ಪು, ಮಿಗೆ, ಅಣಿಯರಂ, etc., ಅಧಿಕ Śm. 58; T. ಅಱುವ, extension; greatness; expanding; *cf.* ಅಡವು 1). [ಮುಳಿಸುಂ ನೋವುಂ ಕಲುಸಮುಮುಳುಮ್ಬಮೆನೆ ತನಗರಾತಿ ಕಾಳಾನಳನೊಳ್ Pb. 2, 58; Ap. 7, 100]. ಅನ್ದಮ್ಬುತ್ತ ಬನ್ದುಗೆಯ ಎಸಳಿಂ ಕತ್ತರಿಸಿ ಪತ್ತಿಸಿದ ಚಿತ್ರಪತ್ರಂಗಳ ಅಳುಮ್ಬಮ್ ಆದ ಪೊಮ್ಪುಟೆಯ ಕಮ್ಪಂಗಳ್ (Cpr. 7, 92 va.). ಅನ್ದು ಎಣಿಕೆಗೆ ಅಳುಮ್ಬಮ್ ಆಗಿ ವಿಭವಂ ಮಿಗೆ (Rśv. 13, 72). see Abh. P. 11, 88 va.; 12, 95; V. 23, 5.

**ಅಳುರ್ aḷur.** to enclose, to cover, to overspread; to prevail (ಆವರಣ Śmd. Dh.); to fall upon. [ಆ ಸುನ್ದರ ನನ್ದನಕ್ಕಳುರೆ ಮುಂ ತನ್ನರ್ಚಿಗಳ್ Pb. 5, 86; Ap. 2, 59]. ದೆಸೆಗಳನ್ ಅಳುರ್ದು (Śmd. 28). ಱುರ್ಚಿದ ಪೋಲ್ ಬಿಸಿಲ್ ಅಳುರೆ ಕಿಮುಱ್ಬಾದ ತಳಿರನ್ತೆ ನೊನ್ದಂ (38). ಒರ್ಬನೆ ಮತ್ಸ್ಯನನ್ತೆ ಅಳುರೆ ತಾಗಿದನ್ ಆಜಿಯೊಳ್ (250. 261 Mdb. MS.). ಬೆಳ್ಪೆಳಗಿನ ಬಾಱ್ಪೆಳೆಯಂ ತಳ್ವದೆ ಬಾಮ್ಬೊಲದೊಳ್ ಅರುಣಕರಶಿಖಿಸಿಕೆ ಪಾಱೆೞ್ಚಿನಮ್ ಅಳುರ್ದು ಉಱ (o. r. ಇರೆ) ಚಿನ್ತೆಯನ್ ಅಳ್ವನ್ತೆ ಪೋಲ್ ಓಷಧೀಶ್ವರಂ ಕಳೆಗೆಟ್ಟಂ (Rśv. 12, 13). ಆಳವಿಗೆಱಿದು ಅಳುರ್ವ ಘನನಿದಾಘಕಾಲದೊಳ್ (5, 50 va.). (ಹನುಮನ್ತಂ) ಬಲಮನ್ ಅಳುರೆ ತಾಗುವುದು (Abh. P. 13, 119 va; see also 11, 149. 151). ಅಳುರ್ವ (Grj. 6, 9). ಅಳುರ್ವಡೆ (9, 20).

**ಅಳುರ್ಕೆ aḷurke.** the act or state of enclosing, encompassing, covering, etc. [ಅದಟನಳುರ್ಕೆಯುಂ ಬಲದಳುರ್ಕೆಯುಮಂ ಗೆಡೆಗೊಣ್ಡು Pb. 11, 50; Ap. 5, 43]; (Cpr. 10, 92; Abh. P. 7, 58). (ಆವರಿಸಿದುದು, ದಳ್ಳಿಸಿತು Śm 60; Kk. 53; Abh. P. 10, 214). — ಅಳುರ್ಕೆಗೊಳ್. -ಕೊಳ್.=ಅಳುರ್. to enclose, etc. (Rśv. 6, 11 va.; 8, 50; 13, 70 va.; 13, 77 va.).— ಅಳುರ್ಕೆವೆಱ್. -ಪೆಱ್.=ಅಳುರ್ಕೆಗೊಳ್. (Rśv. 13, 85).

**ಅಳುಲೆ aḷule.**=ಅಣಿಲೆ. (My.).

**ಅಳೆ aḷe.** 1. to measure (ಪರಿಮಾಣ Śmd. Dh.; ಪ್ರಾಮಾಣ Śm. 111; ಪ್ರಮಾಣಿಸು Śmd. 45 Cm.; C.; T., M.; Tu. ಅಳಪು). P. ps. ಅಳ, ಅಳದು, ಅಳೆದು. ಕಿಱುಕುಣಿಕೆಯಿನ್ದ ಅಳದ ಮೊಟಱು ಅರತ್ತಿ

ಎಮ್ಬುದು (Hlā.). ಹೆಜ್ಜೊಟ್ಟು ಕಿಱುಕುಣಿಕೆಗೂಡಿ ಅಳೆವಲ್ಲಿ ವಿತಸ್ತಿ ಎನಿಸುಗು (Nr.). ಹಿಡಿಕೆಯ ಹಿಡಿದು ಅಳೆವ ಮೊಟದಲ್ಲಿ ಸರತ್ನಿ ಎನಿಸುಗು (Nr.). ಅಳವ ಮೋಜ (ಪ್ರಮಾಣಿಕ Mr. 323). ಕೆಯ್ಯ ಮುಷ್ಟಿಗೆಯ್ದು ಅಳೆಯ ರತ್ನಿ ಅಕ್ಕು (323). see Bp. 14, 5; 42, 5; 53, 12. 16. 73. [ಸಮಚತುರಸ್ರಮಾಗೆ ನೆಲನನಳೆದು ಕಲ್ಲಂ ಪುಲ್ಲುಮಂ ಸೋದಿಸಿ Pb. 2, 65 va.; —ಅಳೆವರ್. those who measure out. ಗರ್ಭದ ಕೂಸಿನ ಬಳೆದಳವಿಯ ಳವನಳೆವರುಮೊಳರೇ Pb. 1, 126]. — ಅಳಮ ಹಾಕು. to ponder. ಮನದೊಳಗೆ ಅಳಮ ಹಾಕುತ್ತಾ ಕುಳಿತನು (B. 3, 50).

**ಅಳೆ aḷe. 2.** measure. see ಕಟ್ಟಳೆ No. 1. s. ಕಟ್ಟು 1, ಕುತ್ತಳೆ.

**ಅಳೆ aḷe. 3.** buttermilk (ತಕ್ರ Śmd. Dh.; Mr. 182; Ss.; ತಕ್ರ, ಅರಿಷ್ಟ, ಉದಶ್ವಿತ್ತು, ದಣ್ಡಾಹತ, etc. Hlā.: ಕಜಲ್ Śm. 107; ಮಜ್ಜಿಗೆ 111; My.; T.; Tu.). [ಮಱುಗುವ ಪಾಲ್ಗಳೆಯ ಪನಿಗಳಂ ಬೆರಸಿದಪೋಲ್ Kr. 1, 58; Vr. 68, 26]. ಅಳೆ ಬೆರಸಿದ ಮೊಸರು (ದ್ರಪ್ಸ Hlā.). ಈಚಲ ಮರದ ಕೆಳಗೆ ಕೂತು, ಅಳೆ ಕುಡಿದ ಹಾಗೆ (Prv.). ಅಳೆಯ ಆಸೆ ಹೆಪ್ಪಿಂಗೆ, ಮಱುಯಾಸೆ ಸಕಲರಿಗೆ, ಬಲೆಯಾಸೆ ಮೀನ ಹಿಡಿವವಗೆ, ಹಾದರಕೆ ಸಱುಬಾಡಾಟದ ಆಸೆ (Sp.). see ಕಟ್ಟಳೆ 2, s. ಕಟ್ಟು 1; ಕೆಯ್ಯಳೆ s. ಕೆಯ್4; Bp. 10 sum.; 10, 6; 14, 25. — ಅಳೆಯುಮ್ಬ. -ಉಮ್ಬ. a buttermilk-eater: a Golla (Ct. I, 61).

**ಅಳೆ aḷe. 4.** = ಅಳ 2, ಅಳು 3, etc. — ಅಳೆವೇರಿ. = ಅಳವೇರಿ, ಅಳುವೇರಿ. (My.).

**ಅಳೆತ aḷeta.** = ಅಳತ. (My.).

***ಅಳೆಯಿಸು aḷeyisu.** = ಅಳೆಸು, ಅಳಸು 2. to cause to measure, etc. (My.).

**ಅಳೆಸು aḷesu.** = ಅಳಸು 2, etc. (My.).

**ಅಳ್ಕನೆ aḷkane.** suddenly (ಹಪ್ಪನೆ, ಅಕಸ್ಮಿಕ Ss.; cf. ಅಸ 4, ಅಡ4).

**ಅಳ್ಕಱ್ aḷkaṟ.** -ಅಱು. to fear (ಭಯ Śmd. Dh.).

***ಅಳ್ಕಿಮೆಳ್ಕು aḷkimeḷku.** to get destroyed. ತನ್ನ ಬಲಮುಳ್ಳ ಮಳ್ಕಿಮೆಳ್ಕಿದನ್ತಾದುದು Pb. 5, 100 va.

**ಅಳ್ಕು aḷku. 1.** = ಅಳಕು 1, ಅಳಿಕು, ಅಲುಕು 1. to fear; to be afraid of (ಭಯ Śmd. Dh.; ಸೆಡೆ, ಸುಗಿ, ಬಳ್ಕು, ಅಗಿ, etc., ಭಯವನ್ ಅನ್ Śm. 40; Kk. 72; My.; Tu. ಅಲ್ಕು, ಅಳ್ಕು; cf. ಅಕ್ಕುಳಿಸು 2). [ತಡಕುಂ ಪಿಟ್ಟೆಯುಮೊತ್ತೆ ಮಲ್ಲಡಿಗಳಂ ಬಳ್ಕುತ್ತುಮಳ್ಕುತ್ತು ಮೋರೆದಿಗೊರ್ಮೊರ್ಮೆ ಕುಳುತ್ತುಮೇಱುತಿರೆ ಕಣ್ಡು Pb. 3, 9; Ap. 2, 45]. see e. g. Śmd. s. ಬೆಳ್ಕಱ್; Rśv. 5, 116. 130; 6, 116; 13, 20, 22. 25. 65; J. 6, 28; Abh. P. 14, 10. 166; Grj. 3, 100. — ಅಳ್ಕಾಟ. -ಆಟ. fear (My.).

**ಅಳ್ಕು aḷku. 2.** = ಅಳಕು 2, ಅಲುಕು 2. fear (ಭಯ Śmd. II; ಬೆಗಡು, o. r. ಬಿಗುರ್, ಭಯ Kk. 83; Te.; Tu. ಅಲ್ಕು). — ಅಳ್ಕಱು. -ಅಱು. fear to go away, or to abandon fear (Grj. 6, 85 va.).

**ಅಳ್ಕು aḷku. 3.** = ಅಳಕು 5. — ಅಳ್ಕಾಡು = ಅಳಕ್ಕಾಡು. (My.).

**ಅಳ್ಕು aḷku. 4.** to be without strength, to be impotent (ಅಶಕ್ತಿ Śmd. Dh.; cf. ಅಱ್ಕು 1?). [ನೀಮಿದಾವುದು ಪಡೆಮಾತನಿನ್ನು ನುಡಿದಿರ್ ಪುದುವಾಳ್ಕೆಯೊಳೆನ್ನ ಬಳ್ಕಿದಳ್ಕಿದ ಬಗೆಗಣ್ಡರೇ Pb. 11, 50].

**ಅಳ್ಕೆ aḷke.** (= ಅಳ್ಪು). an embrace (ತಱ್ಕೆ, ಅಪ್ಪುಗೆ, ಆಲಿಂಗನ Ss.; cf. ಅಳ್ಕು 2, ಅಳ 2). [ತನುಗೆ ಪೊಱ್ ತುಡುಗೆ ನವಲೇಪನಮು ಮುಳಂ ಗೀತಮುಳ್ಕೆ ನೃತ್ಯಂ ಬಗೆಯುಳ್ಕೆ ನಗೆ ದಲುನ್ನತ್ತ ವಿಳಾಸನಂ Ap. 9, 55]. see ಕಟ್ಟಳ್ಕೆ s. ಕಟ್ಟು 1.

**ಅಳ್ಟೆ aḷṭe.** = ಅಟ್ಟೆ 4, No. 3, ಅಳ್ಳಟ್ಟೆ. juiceless remainder (My.).

**ಅಳ್ನೆಲ aḷnela.** a bog, a morass. see s. ಅಳ್ 2.

**ಅಳ್ಪು aḷpu.** = ಅಪ್ಪು 3, (ಅಳ್ಕೆ). an embrace. ತಱ್ಪಿನಲ್ ಅಳ್ಪಿಂಗೆ (Ct. II, 53).

**ಅಳ್ಳಕ aḷḷaka.** = ಅಳಕ. (C.). 2, the state of being loose, as that of a nail; that of being not tight, as that of a garment (C.).

**ಅಳ್ಳಟ್ಟೆ aḷḷaṭṭe.** = ಅಳ್ಟೆ, etc. (My.).

**ಅಳ್ಳಾಟ aḷḷāṭa.** swinging. fr. ಅಳ್ಳಾಡು. see s. ಅಳ್ಳು 1.

**ಅಳ್ಳಿ aḷḷi.** = ಅಣಿಲೆ, etc. — ಅಳ್ಳೀ ಕಾಯ ಗಿಡ. (My.; ಜೀತಕಿ G.). ಅಳ್ಳೀ ಕಾಯಿ. (B. 1, 22).

**ಅಳ್ಳಿಱಿ aḷḷiṟi.** see s. ಅಳ್ಳು 1.

**ಅಳ್ಳು aḷḷu. 1.** = ಅಗಲ್, etc. (ನಳ್ಳು 1). — ಅಳ್ಳಾಟ. -ಆಟ. = ಅಲ್ಲಾಟ. moving, swinging, waving, etc. [ನೋಟಿನೊಳಟ್ಟಿಱಂ ಬಡೆದು ಮುಳ್ಳುಡಿಯೊಳ್ ಬಗೆಪೊಕ್ಕು ಜಾಣೊಳಳ್ಳಾಟಮನೆಲ್ಲಮಂ ಕಿಡಿಸಿ Pb. 3, 82]. (ದೋಲೆ, ಪ್ರೇಂಖೆ, ಪ್ರೇಂಖೋಲನ Hlā.). — ಅಳ್ಳಾಡಿಸು. -ಆಡಿಸು. = ಅಲ್ಲಾಡಿಸು. to cause to swing, etc. ಅಳ್ಳಾಡಿಸಲ್ ಪಟ್ಟುದು (ಆನ್ದೋಲಿತ, ಲೋಲಿತ, ತರಲಿತ Nr.). ಅಳ್ಳಾಡಿಸಲ್ ಪಟ್ಟುದು (ಕವಲಿಸಲ್ ಪಟ್ಟನ್ಥದು, ವೇಲ್ಲಿತ, ಪ್ರೇಂಖಿತ, etc. Si. 377). — ಅಳ್ಳಾಡು. -ಆಡು. = ಅಲ್ಲಾಡು. to move (v. i.), to swing, to shake, to tremble, etc. [ತಾನಳ್ಳಾಡೆಯುಂ ಬರ್ದೆಯರ ಮನವನಳ್ಳಾಡಿಸುವನ್ತಾದುದು Pb. 2, 39 va.; Ap. 13, 53]; (Abh. P. 9, 63; Rśv. 11, 115). ಅಳ್ಳಾಡುವುದು (ಪ್ರೇಂಖೋಲಿತ, ಪ್ರೇಂಖಿತ, ತರಲಿತ, ಲುಲಿತ Hlā.). ಅಳ್ಳಾಡುವದು (ಸ್ಫುರಣ, ಸ್ಪುರಣ Si. 389). ನೀರು ಅಳ್ಳಾಡಿ ತುಳಕಾಡುವಿಕೆ (ಜಲೋಚ್ಛ್ವಾಸ, etc. 83). — ಅಳ್ಳಿಱಿ. ಅಳ್ಳ ಇಱಿ. to strike so that tremor is produced: to set in rapid motion, to shake, to cause to throb, quiver or tremble (ಸ್ಪನ್ದನ Śmd. Dh.). [ಉಗ್ರಘನು ಕರಾಗ್ರದೊಳಿರೆಯುಳ್ಳಿಱಿಯೆ ಹರಕೇತು ನಭದೊಳ್ Pb. 10, 57; Ap. 11, 67]. ಆ ಹಾಹಾರವ ದಿಗನ್ತವನ್ ಅಳ್ಳಿಱಿಯಲ್ (Bhāgavata 10, 40, 2). ಬೃಹದ್ಬೃಂಹಿತಂ...ಹೇಷಾಸಮುದ್ಘೋಷಿತಂ ಬೆರಸಿ ನಭೋಮಣ್ಡಲಮನ್ ಅಳ್ಳಿಱಿದುದು, ಆಳುರ್ಕೆಗೊಳೆ (Rśv.-6, 11 va.). see Abh. P. 3, 60 va.; Grj. 5, 46; Rām. 5, 8, 24; C. Bp. 32, 43; J. 12, 12. 2, to quiver, etc. (Bh. 1, 14, 10). — ಅಳ್ಳಿಱಿಸು. -ಇಱಿಸು. = ಅಳ್ಳಿಱಿ No. 1. (ಬಾರಿಸು Ct. I, 87).

**ಅಳ್ಳು aḷḷu. 2.** (= ಅಳ್ 2). shaking, trembling. — ಅಳ್ಳನೆಲ. = ಅಳ್ನೆಲ. (S. Mhr.). — ಅಳ್ಳ ಹೊಟ್ಟೆ. = ಅಳ್ಳೊಟ್ಟೆ (S. Mhr.). — ಅಳ್ಳೆದೆ. -ಎದೆ. a trembling heart (J. 19, 3). [—ಅಳ್ಳೆರ್ದೆ. = ಅಳ್ಳೆದೆ. ವಿಳಾಸದಿನ್ನಿಱುಂಕಿದ ನಿಜಾಗಣ್ಡರಳ್ಳೆರ್ದೆಗಳಂ ತುಱುಪೋಜೆಯು ಸುಣ್ಣಮಾಡುವನ್ದದೆ ನಿಡುಗಣ್ಗಳೊಳ್ನಡೆ Pb. 4, 35; Ap. 2, 73].

**ಅಳ್ಳು aḷḷu. 3.** = ಅರಳು 3. (C.). — ಅಳ್ಳ ಬೊಕ್ಕೆ. prickly-heat (My.). — ಅಳ್ಳಯ್ಯ. -ಅಯ್ಯ. = ಹಳ್ಳಯ್ಯ. N. (Bp. 61, 4).

**ಅಳ್ಳೂಮ aḷḷūma.** = ಅಣಿಲ್, etc. a squirrel (My.).

**ಅಳ್ಳೆ aḷḷe. 1.** = ಅಣಿಲೆ, etc. (My.).

**ಅಳ್ಳೆ aḷḷe. 2.** (fr. ಅಳ್ 2). that wich is shaking or heaving: that portion of the abdomen of man, which, on either side, is immediately below the costal margin is regarded as a very tender spot, and heaves in quick breathing from anxiety, etc.: the weak spot (C.; M.; Tu. ಅಲ್ಲೆ, ಅಳ್ಳೆ: see ಅಳ್ಳೊಟ್ಟೆ): tenderness, weakness, slenderness. ಹೊಟ್ಟೆಯ ಬಲದ ಅಳ್ಳೆ

(Śi. 205). 2, the flank of an animal (My.). ಕುದುರೆಯ ಅಳ್ಳೆ (Mr. 279). — see Bp. 47, 32. 58; Bh. 1, 14, 10; Rām. 5, 8, 84. 85; J. 10, 24; 11, 25; ಕುಡಳ್ಳೆ, ಕುಡಿಯಳ್ಳೆ. — ಅಳ್ಳೆ ಇಱಿ. to strike, pierce, or touch the aḷḷes (Bh. 2, 13, 41; 2, 14, 61). — ಅಳ್ಳೆ ಕುಡಿ. = ಕುಡಿಯಳ್ಳೆ. the aḷḷe's point: that place of a man's abdomen, which, on either side, adjoins the aḷḷe in the direction of the flank (My.). — ಅಳ್ಳೆಗುತ್ತು. -ಕುತ್ತು. striking the aḷḷes (sides) (Rām. 6, 26, 28). — ಅಳ್ಳೆಗೊಬ್ಬು. -ಕೊಬ್ಬು. trifling strength, feebleness (Bh. 1, 14, 21). — ಅಳ್ಳೆಗೊಮ್ಬು. -ಕೊಮ್ಬು. (Śmd. 118). a slender branch. ಎಳವೆಣ್ ದಾಡೆ, ಕೆನ್ದಳಿರೆ ನಾಲಗೆ, ಸೂಮರದ ಅಳ್ಳೆಗೊಮ್ಬಿನೊಳ್ ಮಿಳಿರ್ವ ಎಳವಳ್ಳಿ ಬಾಲಮ್, ಅಲರ್ದೊಂಗಲೆ ಕೇಸರಮ್, etc. (Śmd. 81; Kāvy. I, 1*b*, 33). [-ಅಳ್ಳೆ ಜೊಳ್ಳೆತನ. infirmity, emptiness. ಕೂಡೆ ಜೋಲ್ದು ಸಡಿಲ್ದಿರ್ದೊಡಲಳ್ಳೆಜೊಳ್ಳೆತನಮಂ ಮೇಣ್ಕಾಣನೋ Ap. 2, 45]. — ಅಳ್ಳೆ ಪಾಱು. the aḷḷes to heave or palpitate. ಪಕ್ಕದ ಪಾಱುವ ಅಳ್ಳೆಗಳ್ (Rām. 3, 7, 24). [— ಅಳ್ಳೆವಿಳ್ಳೆ. exhaustion. ಪಗಲಿನನುವರದೊಳಳ್ಳೆವಿಳ್ಳೆಯಾದ ಪಾಣ್ಡವರನಿರುಳೊಳೆಗೆಲ್ವೆನೆನ್ದು Pb. 12, 4 va.; Ap. 11, 70 va.]. — ಅಳ್ಳೆವೊಯ್. -ಪೊಯ್. = ಅಳ್ಳೆ ಪಾಱು. (Abh. P. 7, 93).

**ಅಳ್ಳೆ aḷḷe.** 3. = ಅರಳೆ 1, etc. (My.).

**ಅಳ್ಳೆ aḷḷe.** 4. = ಅರಳೆ 2, etc. (My.).

**ಅಳ್ಳೇಱು aḷḷēṟu.** a superficial wound, a scratch etc. see s. ಅಳ್ 5—.

**ಅೞ್ aḻ.** 1. = ಅೞಿ 1. to perish, etc. ಅೞ್ದನ್ ಎನ್ದು, ಕೆಟ್ಟನ್ ಅಕ್ಕುಂ (Śmd. I). ಭವನಮ್ ಅೞ್ದು, ಬಸವನು ಸಂಗವೀಶನೊಳ್ ಅಯ್ದು, ಸೊಯಮ್ ಅದ (Bp. 61 sum.). see ಅದವೞಲ್.

**ಅೞ್ aḻ.** 2. = ಅದ್ 2, etc., ಆೞ್, etc. to sink in a fluid, to be immersed. P. p. ಅೞ್ದು. ಅೞ್ದನ್ ಎನ್ದು, ನೀರೊಳ್ ಮುೞುಂಗಿದನ್ ಅಕ್ಕುಂ (Śmd. I; T. ಅೞುಂಗು, to be pressed down; to sink; ಅವಲ್, depth). ಅೞ್ದಂ (Śmd. 285. 288). ಪರಿದ ಅರಕ್ತರಸದೊಳ್ ಅೞ್ದು ಬಿೞ್ದ ಆ ಶಿರಃಪುಣ್ಡರೀಕಂ (Rśv. 13, 96 va.). *cf.* ಅಮುಕು.

**ಅೞ್ aḻ.** 3. = ಅತ್ 3, ಅೞು 1. to weep, to cry, to wail (ರೋದನ Śmd. Dh.; T., M. ಅೞು; Tu. ಅರ್). P. p. ಅೞ್ತು [ಪ್ರತಿಮೆಗಳೞ್ತುವು ಮೊೞಗಿದುದತಿರಭಸದೆ ಧಾತ್ರಿ ದೆಸೆಗಳುರಿದುವು Pb. 1, 132; Ap. 3, 53]. (Śmd. 286). ಹಾ, ರಾಮಾ ! ಎನ್ದು, ಸೀತೆ ಬಾಯ್ ಅೞದು ಅೞ್ತಳ್ (Śmd. 68). ಬಿಕ್ಕಿ ಬಿಕ್ಕಿ ಅೞುತ್ತ (Bp. 50, 7). see J. 28, 35. 54.

**ಅೞ್ aḻ.** 4. (= ಅೞ, ಅೞು 2). weeping; sorrow. 2, = ಅೞಿ 2, ruin, death (see ಅಗ್).

**ಅೞ- aḻa.** = (ಅೞ್ 4), ಅೞು 2.—ಅೞುಬುರುಕ. -ಪುರಕ. = ಅೞುಪುರುಕ. a male person who easily cries or is fretful (S. Mhr.). — ಅೞಮೋೞ್. = ಅೞುಮೋೞ್. (S. Mhr.).

**ಅೞಟು aḻaṭu.** to be in anguish or affliction, as the sick in a violent fever (R.; T., M. ಅೞಟ್ಟು, to set on fire; to burn, as with pepper; to afflict; to burn, as a sore; to be in anguish, etc.).

**ಅೞಲ್ aḻal.** 1. = (ಅಂಗಲ್), ಅಡಲು 1 No. 3, ಅೞಲು 1. to grieve, to be afflicted (ದುಃಖ Śmd. Dh.; T. ಅೞಲ್, to be burnt, be hot; T., M. ಅೞಲ್, fire; heat; brightness; inflammation; pungency; T. ಅವಿರ್, splendour; Tu. ಅರತೆ, heat, burning; Te. ಅಲುಗು, to be angry; ಅಲಕ, ಅಲುಕ, ಅಳ್ಕೈ, anger; *cf.* ಅೞ್ಕು 1). P. p. ಅೞಲ್ದು [ಪುರಜನಂಗಳೆಲ್ಲಂ ನೆರೆದವರ ಪೋಗಿಂಗ ಅೞಲ್ದು ಸೈರಿಸಲಾಱದೆ Pb. 2, 93 va.]; (Rśv. 13, 95 va.; J. 28, 17. 19). ಮಱುಗಿ ನುಡಿದು, ಅೞಲೆ ಬಗ್ಗಿಸಿ (Śmd. 28). ಅೞಲ್ದಳ್ ಅಮ್ಭೋಜನೇತ್ರೆ (J. 19, 17). ಅೞಲುತಮುತಂ (Bp. 45, 7). see J. 13, 53; 19, 25; 21, 4. 7; 23, 25. 55. 57; 24, 1; 26, 53; Grj. 4, 69.

**ಅೞಲ್ aḻal.** 2. = ಅಡಲು 2 No. 3, ಅನಲ್ 3, ಅೞಲು 2. mental heat: grief, sorrow, affliction (ಮಿಟ್ಟನೆ ಮಿಡುಕಿತು Ct. II, 27; Kk. 43; ಕಡುಶೋಕ Bhn. 47; *cf.* ಅನಲು). [ಅೞಪಿದವರುಂ ವಿಭೀತರುಮೞಲ್ದರುಂ Kr. 2, 25; Pb. 3, 7; Vr. 8, 9]. ಮನ್ದಯ್ಸದ ಅೞಲಿಂ ಮುನ್ದುಗೆಟ್ಟು, ಕೆಟ್ಟಂ ! ಕೆಟ್ಟನ್ ! ಎನ್ದು (Rśv. 13, 104 va.). ಎನ್ನ ಅೞಲ್ ತಗ್ಗುವದು ಎತಱಲಿ ? (Bp. 45, 41). see J. 9, 17; 13, 55. 64; 14, 9. ಅೞಲುರಿ. -ಉರಿ. grief; fire; excessive grief. (Śśv. 1, 32). — ಅೞಲೊಸಗೆ. -ಒಸಗೆ. sorrow and joy (Cpr. 5, 31). — ಅೞಲ್ತೊಱೆ. -ತೊಱೆ. a river of sorrow (J. 18, 59).

**ಅೞಲಿಕೆ aḻalike.** the state of being afflicted (C.). see ಕಟ್ಟೞಲಿಕೆ.

**ಅೞಲಿಗ aḻal-iga.** a man who suffers grief, etc. (J. 9, 16).

**ಅೞಲಿಸು aḻalisu.** = ಅೞಲ್ಚು. (My.). ಅೞಲಿಸಲ್ ಪಟ್ಟುದು (ಕ್ಲಿಷ್ಟ, ಕ್ಲೇಶಿತ Nr.). see J. 5, 31.

**ಅೞಲು aḻalu.** 1. = ಅೞಲ್ 1, etc. (My.). P. p. ಅೞಲಿ (Bh. 1, 10, 21). ಅೞಲುವರ್ (J. 28, 16). see J. 19, 30; 24, 58.

**ಅೞಲು aḻalu.** 2. = ಅೞಲ್ 2, etc. (ಮಿಟ್ಟನೆ ಮಿಡುಕಿತು Śm. 59; C.). ಅೞಲು ನಿನ್ದುದು ಚಕ್ರವಕ್ಕಿಗಳ (Rām. 14, 1). ಅವನಿಗೆ ಅೞಲು ಬನ್ದದೆ (My.). — ಅೞಲುಗಾಳಿ. an unwholesome wind (S. Mhr.). — ಅೞಲು ಬೞಲು. dupl. (C.).

**ಅೞಲ್ಚು aḻalcu.** = ಅೞಲಿಸು to make sorrowful, to grieve, to harass (ದುಃಖೋತ್ಪಾದನ Śmd. Dh.; Cpr. 5, 10).

**ಅೞವು aḻavu.** = ಅೞಪು 1, etc. — ಅೞವಾಡು. -ಆಡು. to ruin, to destroy (S. Mhr.).

**ಅೞವೆ aḻave.** the mouth of a river in which the tide ebbs and flows, bar (Mg., also ಅರುವೆ, ಅಳುವೆ; T., M. ಅೞಿ).

**ಅೞಸು aḻasu.** 1. = ಅೞಿಸು 1, etc. to efface (My.).

**ಅೞಸು aḻasu.** 2. = ಅೞಿಸು 2, etc. to make cry (C.).

**ಅೞಿ aḻi.** 1. = (ಅವಿ 2). to be ruined, to be destroyed, to perish; to decay; to disappear; to be effaced; to die (ವಿನಾಶ Śmd. Dh.; ಕಿಡು, ಸಾಯ್ Śmd. I; My.; T., M.; Tu. ಅಳಿ; Te. ಅರು = ನಶಿಂಚು; M. ಅೞಿ also: to be untied, to become loose; T., M. also: to be wasted, squandered, lavished, spent; see s. ಅೞ್ಚು 3). [ಅೞಿದಱಿ ಬೞಿಯನುೞಿಯದೆ ಪೞಿವರುಮಂ ತವಿಸಿ ಕೞಿಯದೆ Kr. 3, 176]. ರೂಪು ಅೞಿದ ಸಾವು (ಮೃತ್ಯು Śmd. I). ನಾಮರೂಢಿ ಅೞಿಯದ ಪಕ್ಷಂ (Śmd. 62). ಬೆಳಗು ಅೞಿದುದು (Śm. 65). ಬಲ್ಪು ಅೞಿದು (Rśv. 5, 39). ಅೞಿಯೆ ತಮಂ (6, 133). ಅೞಿದ ಉಷ್ಣದ ಹಾಲಿನ ಅನ್ದದಿ ಸುಲಭಮ್ ಆಗಿರ್ದ ಲಲಿತಮ್ ಆಪ ಕನ್ನಡದ ನುಡಿ (Abhā. 1, 5); see Bp. 8, 50; 30, 14; 45, 35; Rśv. 13, 103; Bh. 1, 8, 89; J. 4, 62; 11, 22. 25; 15, 4; ಅಸುವೞಿ, ಉರ್ಕೞಿ, ಪಾಂಗೞಿ, ಬಸವೞಿ. ಅೞಿವ ಊರಿಗೆ ಉೞಿದವನೇ ಗವುಡ (Prv.). 2, to ruin, to destroy, etc. (ಕೆಡಿಸು Śmd. I). ಇರ್ದುದನ್ ಅೞಿಯದೆ; ಇರ್ದುದನ್ ಅೞಿದು (Śmd. 195). see Bp. 16, 3; 18, 41; 39, 15; 54, 69; 59, 54. — ಅೞಿಅೞಿ. rep.

(Abh. P. 14, 102). — ಅೞಿದುೞಿ. ಅೞಿದು ಉೞಿ. to be destroyed and to remain; to be routed, but escape with life, to have a hair-breadth escape; to recover from adverse circumstances (ಕೆಟ್ಟರೂ ಜೀವದಿನ್ದ ಉೞಿ G.). ಕೊಳಂ...ಅೞಿದಃೞಿದು ಭಂಗಮುಮಂ ಆಗಿರ್ದ ಮುೞಿದ ನೃಪದಳಮ್ ಅಲ್ಲ (J. 15. 14). see Bp. 26, 30; Rām. 5, 9, 2; J. 5, 41; 20, 38. 62.

**ಅೞಿ aḷi. 2.** = ಅಡಿ 6. ruin; waste; damage, loss; destitution; wane; uselessness. 2, the liquid that sticks to, or remains in, the measure of the seller (ಮಾನಶೇಷರಸ Śmd. Dh.; ಬಳ್ಳದ ಅೞಿ Śmd. I). [ಅವರಿರ್ವರುಮಂ ಕಾದೞಿವೆನುೞಿದ ರಿಪು ನೃಪಬಲಮುಂ Pb. 10, 14]. ಬಳ್ಳದೞಿ (Śmd. 162). 3, a void, a nought, expressed by the sign ⌒ in writing accounts (My.), *e. g.* "ರು ೧ ⌒ = " means "1 rūpāy, no pāvali, 1 bēḷe (*i. e.* aṇas)". — ಅೞುಗಣ್. -ಕಣ್; ಅೞುಗಣ್ಣು. -ಕಣ್ಣು. a bad or miserable eye, no eye, a blear eye (ಅಚಕ್ಷುಸ್ Hlā; ಅಚಕ್ಷು Mr. 459). see Bp. 18, 66. — ಅೞುಗಣ್ಡ. a good-for-nothing, despicable hero (Abh. P. 14, 102). — ಅೞುಗಣ್ಡು. worthless (boastful) bravery (Abh. P. 14, 182). — ಅೞುಗಣ್ಣವನು. -ಕಣ್ಣವನು. a blear-eyed or dim-sighted man (ಪಿಲ್ಲ, ಚುಲ್ಲ, ಚಿಲ್ಲ Hlā.). — ಅೞುಗಬ್ಬ. -ಕಬ್ಬ. miserable poetry (Rśv. 1, 23). — ಅೞುಗಬ್ಬಿಗ. -ಕಬ್ಬಿಗ. = ಅೞುಗವಿ. (Rśv. 1, 24). — ಅೞುಗವಿ. -ಕವಿ. a ruinous, bad, or useless poet. ಅೞುಗವಿಗಳ ಕವಿತೆ ಬುಧರನ್ ಎರ್ದೆಗೊಳಿಸುಗುಮೆ? (Śmd. 78). — ಅೞುಗಾಲ. -ಕಾಲ. = ಅಡಿಗಾಲ. a time of ruin or death (My.). — ಅೞುಗಯ್ತ. -ಕೆಯ್ತ. mean trickery (Abh. P. 9, 146 va.). — ಅೞುಜಪ. useless prayers (Abh. P. 14, 102). [— ಅೞುನುಡಿ. mean talk. ಅೞುಪಿದೆಯನ್ನುಮಲ್ಲದೆ ನಿಶಾಚರಿಯೈ ನಿನಗಪ್ಪುದಪ್ಪುದೀಯೞುನುಡಿ Pb. 3, 16]. — ಅೞುನೆತ್ತಿ. the fontanel of children (C.). — ಅೞುಬಿಡು. to give a few drops more to make good what remains in the seller's measure (C.). — ಅೞುಮನ. a mean mind (Grj 5, 54). — ಅೞುಮನ್ತ್ರ. a pernicious incantation. ನಿನಗೆ ಅೞುಮನ್ತ್ರ ಬನ್ದು, ಸತ್ತು ಹೋಗು (S. Mhr.). [-ಅೞುಮಾನಿಸ. a mean person. ಸಾಧುಗೆತ್ತು ಬಗೆಯಾದವ ನಾನೊಡನಟ್ಟಿದೆನಾದಮಾನುಮೞುಮಾನಿಸನಾಗವೆ ಮಾಳಪೊಳ್ ಮೋದದಿಂ ನುಡುವ Kr. 1, 128]. — ಅೞುಮಿೞಿ. a worn out or damaged tie. ಹುರಿ ಅೞಿದ ಅೞುಮಿಳಿ (Śmd. 286). — ಅೞುಯಾಸೆ. -ಆಸೆ. = ಅಡಿಯಾಸೆ. vain hope, fruitless desire; destitution of hope, despair (My.). see Bp. 40, 33; 42, 26; Rām. 26, 17. — ಅೞುಯಾಳ್. -ಆಳ್. an enervated, impotent man; a eunuch (ಕ್ಲೀಬ Mr. 481; My.). — ಅೞುಯೂರ್. -ಊರ್. a ruined village (My.). [ಇತ್ತು ಗುರುದಕ್ಷಿಣೆಯಾಗಿರೆ ಕಶ್ಯಪ ಪ್ರಜಾಪತಿಗೆ ಸಮುದ್ರ ಮುದ್ರಿತ ಧರಿತ್ರಿಯನೊನ್ದೞುಯೂರನೀವ ಪೊಲ್ Pb. 2, 45]. ಅೞುಯೂರ ತಳವಾರ, ಕಳೆಯುಳ್ಳ ಸೂಳೆಯೂ. ಪೊೞಲ ಸುಂಕಿಗ, ಹೞಿನಾಯಿ, ಯಾಚಕನು ತೊಲಗುವರೆ? ಇಲ್ಲ! (Sp.). — ಅೞುಯೆರ್ದೆಯ. -ಎರ್ದೆಯ. a coward (My.; ಧೈರ್ಯವಿಲ್ಲದವನು G.). [—ಅೞುವಾಡ. -ಬಾಡ. ruined village. ಅಯ್ದೞುವಾಡದೊಳಯ್ವರುಮಂ ನೀ ಕೂರ್ತಿರಿಸು Pb. 13, 86]. — ಅೞುವೆಣ್. -ಪೆಣ್. a good-for-nothing woman (ಅಲ್ಪತರುಣಿ Śm.73; Kk. 28; ಅಲ್ಪಸ್ತ್ರೀ Śs.; Abh. P. 6, 68). [-ಅೞುವೆಸನ. -ಬೆಸನ. mean work. ಪೆಸರೊಳ್ ಸ್ವೈರಣ್ಪ್ರಯೆನೞುವೆಸನದ ದೆಸೆಯುೞಿಯಿಂ Pb. 8, 57. — ಅೞುವೊಡಲ್. -ಒಡಲ್. a body liable to be destroyed. ಅೞುವೊಡಲನಿದಂ ಪೋಗೆ ನೂಂಕಿ ಚೆಲ್ವಪ್ಪೊಡಲಂ ಪಡೆದಪೆ Ap. 2, 58].

**ಅೞಿಕ aḷi-ka.** (Śmd. 241). a destroyer. 2, a good-for-nothing man. (Upr. 6, 39).

**ಅೞಿಕಿಸು aḷikisu.** to efface, to erase (S. Mhr.; ತೊಡೆ Cb.).

**ಅೞಿಗೆ aḷige.** Tbh. of ಅಲಿಕ.

**ಅೞಿಗೆವದ್ದ aḷigevadda.** Tbh. of ಅಲಿಕಾಬದ್ಧ (Śmd. 30, o. r. -ಬನ್ಧ).

**ಅೞಿಚು aḷicu.** = ಅೞಿಸು 1, etc. (My.).

**ಅೞಿಪು aḷipu. 1.** = ಅೞಿವು, ಅೞುವು 1, (ಅೞಿಸು 1, etc.), ಅೞುಪು 1. to destroy, etc. (ಲೋಪತ್ವ Śmd. Dh.). 2, to be ruined, destroyed, etc. ಅೞಿಪನ್ ಎನ್ದು, ಅೞಿಪುವನುಮ್ ಅೞಿಪಿದವನುಮ್ ಅಕ್ಕುಂ (Śmd. I).

**ಅೞಿಪು aḷipu. 2.** = ಅೞುವು 2, ಅೞುಹು, ಅೞುಪು 2, ಅೞುವು 2, ಅೞುಹು, ಅೞ್ವು 2. ruin, destruction; death (Abh. P. 14, 13 va.); breaking, as of promises or vows.

***ಅೞಿಪು aḷipu. 3.** desire, affection. ಅೞಿಪಿದವರುಂ, ವಿಭೀತರುಂ Kr. 2, 25; ಅೞಿಪಿನ ಲಲ್ಲೆಯ ಚೆಲ್ಲದ ಪುರುಡಿನ ಮುಳಿಸಿನ ನೆವದ ಪಡೆಮಾತುಗಳಿಂ Pb. 7, 94 va.; ಅೞಿಪವೆ ಪದಗಳಿಪವೆ ಪೊಮ್ಪುೞುವೋಗೆ...ತೊೞ್ತುನುೞುವಂತಃೞಿದಂ ಸಾಮ್ರಾಜ್ಯ ಲಕ್ಷ್ಮಿಯುಂ ಚಕ್ರಧರಂ Ap. 4, 87.

**ಅೞಿಯಿಸು aḷiyisu.** = ಅೞಿಸು 1, etc. to cause to be dissolved; to cause to disappear, to destroy, etc. (ಲಯ Śmd. Dh.; *cf.* ಅೞ್ಗು).

**ಅೞಿವು aḷivu. 1.** = ಅೞಿಪು 1, etc. to destroy, etc. ಬಸವ ಶರಣೆನೆ ಪಾಪಮ್ ಅೞಿವುಗು (Bp. 1, 25).

**ಅೞಿವು aḷi-vu. 2.** (Śmd. 247). = ಅೞಿಪು 2, etc. destruction, etc. [ನೀನೆನ್ನೊಲೆಯ ಕಡಗದೞುವನೇಂ ನೋಡಿದಪಾ Pb. 11, 123]. (Bp. 38, 59). ನಿನ್ನ ಭಾಷೆಗೆ ಅೞಿವು ಇಲ್ಲ, ಅಲಾ? (J. 4, 70). see Prv. s. Tbh. ನಳ; Bh. 8, 22, 42; Rām. 5, 8, 46; J. 2, 5; 8, 42; 32, 34. — ಅೞಿವುೞಿವು. -ಉೞಿವು. destruction and preservation (J. 8, 42).

**ಅೞಿಸು aḷisu. 1.** = (ಅಚ್ಚು 3), ಅೞಿಸು 1, (ಅೞಿಪು 1), ಅೞಿಯಿಸು, ಅೞುಚು, ಅೞುಸು 2. to ruin, to destroy; to kill; to efface. ಅೞಿಸಿ ಹಾಕುವದು (ಪ್ರಮಾಪಣ, etc. Si. 297; My.).

**ಅೞಿಸು aḷisu. 2.** = ಅೞಿಸು 2, ಅೞುಸು 1. to make weep or cry (C.). ಮಕ್ಕಳನ್ನು ಅೞಿಸದೆ (B. 3, 32).

**ಅೞಿಹು aḷihu.** = ಅೞಿಪು 2, etc. (My. rare).

**ಅೞು aḷu. 1.** = ಅತ್ 3, ಅೞ್ 3. to weep, to cry. P. p. ಅತ್ತು (C.). [ಬೞಿಯನೆ ಮಕ್ಕಳ್ ಭೋರ್ಗರೆದೞುತುಂ ಪೆಱಪೆಱಗನನ್ತೆ ಪರಿತರೆ Pb. 2, 24]. ಅೞುಗು (Bp. 14, 17). ಬಾಯ್ಬಿಟ್ಟು ಅೞುವ ಲಿಂಗ (45, 27). ಗೋಳೋ ಎನ್ದು, ಅೞುವದು (ಕ್ರನ್ದಿತ, etc. Si. 73). ಅೞುವ ನೀರು (ಅಶ್ರು, etc. 214). ಅೞುವ (J. 28, 36. 38). ಅೞುವ ಮಕ್ಕಳ ಕಣ್ಣೀರ ಒರಸಿದ ಹಾಗೆ. — ಅೞುವ ಮಕ್ಕಳ ಕೆಯ್ಗೆ ಬೆಲ್ಲ ಕೊಟ್ಟ ಹಾಗೆ. — ಅೞುವ ಹೆಂಗಸನ್ನೂ ನಗುವ ಗಣ್ಡಸನ್ನೂ ನಮ್ಬಬಾರದು. — ಅೞುವವನ ಎಡಕ್ಕೂ ಹೊಲಿಯುವವನ ಬಲಕ್ಕೂ ಕುಣ್ಡ್ರಬಾರದು (Prvs.). see Prv. s. ಅಳಿಗೆ. — ಅೞುೞು. rep. ಇದನ್ನು ಕಣ್ಡು, ದುಃಖದಿನ್ದ ಅತ್ತತ್ತು (B. 5, 72).

**ಅೞು aḷu. 2.** = ಅೞ್, ಅೞುವು 1. weeping, crying. ಮಗುವಿಗೆ ಅೞು ಹುಟ್ಟಿತು or ಬನ್ತು (My.). — ಅೞುಗೂಸು. -ಕೂಸು. a crying or cross child (S. Mhr.). — ಅೞುಪುರುಕ. (My.). = ಅೞುಬುರಕ. (My.). — ಅೞುಪುರುಕತನ. the state of being an ಅೞುಪುರುಕ (My.). — ಅೞುಪುರುಕಿ. a female ಅೞುಪುರುಕ (My.). — ಅೞುಪುರುಕಿತನ. the state of being an ಅೞುಪುರುಕಿ (My.). — ಅೞುಮೋಱೆ. = ಅೞುಮೂಱೆ. a crying or fretful countenance (My.).

**ಅೞುಕುೞಿ aḷu-kuḷi.** (Śmd. 239 Mdb. MS.). an easily crying or fretful person.

**ಅೞುಗು aḻugu. 1.** = ಅರಗು 2, ಅೞ್ಗು. to decay, to rot, to spoil by being over-boiled (T., M.; R.; of this term the ಅೞಚ್ಚಲ್ s. ಅಡಸಲ is formed).

**ಅೞುಗು aḻugu. 2.** to love. ಒಱಲ್ದನ್ ಎನ್ದುವ್, ಅೞುಗಿದನ್ ಎನ್ದುವ್, ಉೞುಗಿದನ್ ಎನ್ದುವ್, ಕೂರ್ತಂ (Śmd. II; M. ಅೞಾವು, tenderness, love; see T. s. ಅರಗು 1; cf. ಅಳಿಪು 1 and 2; ಅಮ್ಮು, ಆರುಮೆ, ಅೞ್ಕಱ್ 1, ಅೞ್ತಿ).

**ಅೞುಚು aḻucu.** = ಅೞಿಸು 1, etc. (My.).

**ಅೞುಪು aḻupu. 1.** = ಅೞಾಪು 1, etc. to destroy, etc. (My.; ಕೆಡಿಸು G.). ಅೞುಪಿದರೆ ಮಧುಕರನ ಮೞಿ ಬೊಬ್ಬುಳಿಯ ವನವೊಳಗೆ, ಏನ್ ಅಹುದು? (Bh. 2, 13, 14).

**ಅೞುಪು aḻupu. 2.** = ಅೞಾಪು 2. ruin, etc. (My.).

**ಅೞುವಿಕೆ aḻuvike.** crying, etc. (My.; ವಿಲಾಪ, ಪರಿವೇದನ Si. 58). ಕೆಯ್ಲಾಗದೆ, ನಾಚಿಕೆ ಪಟ್ಟು ಅೞುವಿಕೆ (398). ಅರ್ತಧ್ವನಿಯಿಂ ಕೂಡಿ ಅೞುವಿಕೆ (ಅಕ್ರನ್ದ 430). ಸಿಟ್ಟುಗೊಣ್ಡು ಅೞುವಿಕೆ (69).

**ಅೞುವು aḻuvu. 1.** = ಅೞು 2. (My.).

**ಅೞುವು aḻuvu. 2.** = ಅೞಾವು 2. (My.; ಕೇಡು G.).

**ಅೞುಸು aḻusu. 1.** = ಅೞಾಸು 2, etc. (My.).

**ಅೞುಸು aḻusu. 2.** = ಅೞಾಸು 1, etc. (My.).

**ಅೞುಹು aḻuhu.** = ಅೞಾವು 2, etc. (My.).

***ಅೞ್ಕಜ aḻkaja. 1.** = ಅಕ್ಕಜ 1. wonder, surprise. ಅೞ್ಕಜವಾಗೆಯಾಡಿದಳ್ Pb. 4, 90.

**ಅೞ್ಕಜ aḻkaja. 2.** = ಅಕ್ಕಜ 2. envy, jealousy, indignation at the merits or happiness of another (ಕೞುಮ್ಬು, ಅಸೂಯೆ Kk. 48, o. r. ಅಕ್ಕಜ; My.; T. ಅೞುಕ್ಕಾಱು, envy; a lie). — ಅೞ್ಕಜಪ್ಪುಡು. -ಂ-ಪಡು. to envy, to grudge, etc. (ಅಸೂಯ Śmd. Dh.; V. 8, 3 va.).

**ಅೞ್ಕಜಕಾಱ aḻkaja-kāṟa.** an envious man (Rśv. 1, 35).

**ಅೞ್ಕಮೆ aḻkame.** (Śmd. 248). the state of being decayed, dissolved, digested, etc. (ಅೞಿವೆ Śmd. I; ಅೞಿವೆಟ್ಟು, o. r. ಅೞಿವೆ, ಜೀರ್ಣ Kk. 48; ಜೀರ್ಣ Śm. 60; see the remarks s. ಅೞಿವೆ 1). 2, indigestion [ಅೞ್ಕಮೆವಡುವುವು ಕುಡಿದೊನ್ದು ಪಣ್ಣ ರಸದೊಳೆ ಗಿಳಿಗಳ್ Pb. 1, 56]; (V. 14, 19; Tu. ಅರ್ಕಮೆ).

**ಅೞ್ಕಱ್ aḻkaṟ. 1.** to love (ಪ್ರೇಮ Śmd. Dh.; cf. ಅೞುಗು 2). P. p. ಅೞ್ಕರ್ತು (Abh. P. 14, 171 va.). [ಓಡವೋಜಾಸಿ ನಡೆಯಿಸುವಲ್ಲಿ ದಿವ್ಯ ಕನ್ನೆಯನೞ್ಕರ್ತು ನೋಡಿ Pb. 1, 68 va; Ap. 2, 20]; ಅೞ್ಕರ್ತನ್ ಎನ್ದು, ಪ್ರೀತಿವಟ್ಟಂ (Śmd. I; Kk. 80). ಅೞ್ಕರ್ತಳ್ (ಕೂರ್ತಳ್ Kk. 29; Śm. 75).

**ಅೞ್ಕಱ್ aḻkaṟ. 2.** -ಱು. = ಅಕ್ಕಱು, etc. love; pleasure. [ಈಕೆಯಿಂ ಪೊೞ್ತು ತುಱಿಪದಿನ್ದೞ್ಕಱಿನ್ದೆತ್ತ ಪೋದಪ್ಪಳೆನ್ದು ಬೞಿವೞಿಯನೆ ನೋಡುತ್ತಂ ಪೋಪರ್ Vr. 16, 13]. (Cpr. 1, 86). ಅೞ್ಕಱಿಂ (Śmd. 117). see Rśv. 4, 79; Grj. 1, 8; 3, 7. 56; 4, 43. 66; ಕಟ್ಟೞ್ಕಱ್.

**ಅೞ್ಕಿಸು aḻkisu.** = ಅಕ್ಕಿಸು. to digest, etc.

**ಅೞ್ಕು aḻku. 1.** = ಅಕ್ಕು 4. to be worn out, decayed, digested, etc. (ಜೀರ್ಣ Śmd. Dh.; cf. ಅೞ್ಗು). (Cpr. 5, 109 va.; Śśv. 2, 17). — ಅೞ್ಕಾಡು. -ಅಡು. = ಅಕ್ಕಾಡು. to become devoid of any residue, to be consumed or finished (ನಿರವಶೇಷ Śmd. Dh.; ಇಲ್ಲವಾದುದು Cm.). [ಓಡುಗೆ ನಿಮ್ಮ ಮೆಯ್ಯ ಪಸಿವಾನ್ತ ವಿರೋಧಿಗಳೆನ್ನ ಕೆಯ್ಯೊಳೞ್ಕಾಡುಗೆ ಕೊಳ್ಳಿಯುಣ್ಣ ಮನೆ ಕೇಳ್ದನಲಂ Pb. 5, 85; Vr. 23, 1]. ಶ್ರೀ ಅೞ್ಕಾಡಿತು ಕುರುನಾಯಕರ ಒಕ್ಕಲೊಳೋ? (Śmd. 64).

**ಅೞ್ಕು aḻku. 2.** = ಅಕ್ಕು 5. the state of being digested, etc.

**ಅೞ್ಕೆ aḻke. 1.** = ಅಕ್ಕೆ 1, ಅರ್ಕೆ. weeping, crying, lamenting (ರೋದನ Śmd. I; ಕ್ರನ್ದಿತ, ರುದಿತ, ವಿಲಾಪ, ಪರಿವೇದನ Hlā.).

**ಅೞ್ಕೆ aḻke. 2.** = ಅಡಿಕೆ 2. boiling, etc. see ನೀರೞ್ಕೆ.

**ಅೞ್ಗು aḻgu.** = ಅೞುಗು 1. to be dissolved (ಲಯ Śmd. Dh.); to decay, etc. [ಪಾಣ್ಡವರುರಿವೞ್ಗಿದರ್ Pb. 3, 7]. (ಕ್ಷೀಣತ್ವ Śmd. Dh.; cf. ಅಗ್ಗಿಸು; ಅೞ್ಕು 1). [— ಅೞ್ಗಿದೞ್ಗು. -ತೞ್ಗು. to ruin, to decay. ಗುಣಾರ್ಣವನಮ್ಬು ಲಕ್ಕ ಲೆಕ್ಕದೆ ಕೊಳೆ ಚಾತುರಂಗ ಬಲಮುಸ್ತ ೞ್ಗಿದೞ್ಗೆ Pb. 8, 21. ಅೞ್ಗಿಮೞ್ಗು = ಅೞ್ಗಿದೞ್ಗು. ನೆಗೞ್ತೆಯ ದೈತ್ಯರೆಲ್ಲಮೆನ್ನ ಚಕ್ರಾಘಾತದೊಳೞ್ಗಿಮೞ್ಗಿದನ್ತಾದರ್ Pb. 6, 24 va.].

***ಅೞ್ಗೆ aḻge.** (cf. ಅಡಿಗೆ). cooking. ನೊೞ್ಗದ ಕರಿಘಟೆ ಜನಪದುವೞ್ಗೆಯನನುಕರಿಸೆ Pb. 11, 64.

**ಅೞ್ತಿ aḻti.** = ಅರ್ತಿ, etc. love; a lovable, pleasant object (ಪ್ರೀತಿ Śmd. I; Ct. I, 35; My.; cf. ಅೞ್ಚು 4, ಅೞುಗು 2). [ನೀಡುಮಪಾತ್ತ ಚಾರುಗುಣನಂ ಮನದೊಳ್ ನೆಱೆ ನೋೞ್ಪೆನೞ್ತಿಯೊಳ್ ಕೂಡಿರನೇೞ್ಪೆನೆಮ್ಬುದಿದು ದಕ್ಷಿಣಮಾರ್ಗ ವಿಚಕ್ಷಣೋದಿತಂ Kr. 2, 102; Pb. 1, 13; Ap. 2, 34]. 2, pleasure (My.; ಸನ್ತೋಷ G.). ಕೂಸಿಂಗೆ ಲಡ್ಡುಗೆ ಅೞ್ತಿ (Śmd. 159). see Grj. 1, 19; 3, 7; Kk. 3; Rśv. 13, 26; J. 28, 20. 53; Dp. 4. — ಅೞ್ತಿವಡು. -ಪಡು. to feel love or desire (V. 30, 35 va.); to become pleasurable (C. Bp. 6, 51).

**ಅೞ್ತಿಕಾಱ aḻti-kāṟa.** = ಅರ್ತಿಕಾಱ. a lover, etc. (Bp. 1, 34).

**ಅೞ್ದು aḻdu. 1.** to wither, to fade. ಅೞ್ದಿದನ್ ಎನ್ದು, ಸೊಪ್ಪಾದನ್ ಅಕ್ಕುಂ (Śmd. I). 2, to die. ಅೞ್ದಿದನ್ ಎನ್ದು, ಸತ್ತನ್ ಅಕ್ಕುಂ (Śmd. I).

**ಅೞ್ದು aḻdu. 2.** = ಅದ್ದು 1, etc. to dip, etc. [ಮುಡಿಯ ಕುಚಯುಗದ ಜಘನದ ಕಡುವಿೞ್ಪಿಂ ಮುಣಲೊಲೞ್ದು ಬರೆ ಪೆಲ್ಲಡಿಗಳ್ Pb. 7, 85; Ap. 3, 43]; (Cpr. 7, 140; Rśv. 10, 31 va.; 11, 19).

**ಅೞ್ದು aḻdu. 3.** = ಅದ್ದು 2, etc. P. p. of ಆೞ್ 2.

**ಅೞ್ವು aḻvu. 1.** burning to go beyond the proper limit (ವಹನಾತಿಕ್ರಮಣ Śmd. Dh.; cf. ಅೞಲ್ 1). [ಘೋರ ಕಾನ್ತಾರದನು ನೊನ್ದು ಬೇಗೆ ಪರಿವನ್ತು ರಥಂ ಪರಿದತ್ತು ವೈರಿ ಕಾನ್ತಾರಮನೞ್ವಲಂಕದ ಬೃಹನ್ದಳೆ ಚೋದಿಸೆ ಚೋದ್ಯಮಪ್ಪಿನಂ Pb. 8, 98; Ap. 13, 86]; (Abh. P. 7, 94).

**ಅೞ್ವು aḻvu. 2.** = ಅೞಾಪು 2, etc., (ಅರ್ವು).

